# ಕುರುಗೋಡು ಪರಿಸರದ ಶಾಸನಗಳು ಮತ್ತು ದೇವಾಲಯಗಳು

(ಶಾಸನಶಾಸ್ತ್ರ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಸಂಪ್ರಬಂಧ)


ಸಂಶೋಧಕ

ಶಶಿಧರ ಡಿ.

ಮಾರ್ಗದರ್ಶಕರು

ಡಾ. ಕೆ.ಜಿ.ಭಟ್‌ಸೂರಿ

ಸಹ ಪ್ರಾಧ್ಯಾಪಕರು





ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦

# ಕುರುಗೋಡು ಪರಿಸರದ ಶಾಸನಗಳು ಮತ್ತು ದೇವಾಲಯಗಳು

(ಶಾಸನಶಾಸ್ತ್ರ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಸಂಪ್ರಬಂಧ)

ಸಂಶೋಧಕ

ಶಶಿಧರ ಡಿ.

ಮಾರ್ಗದರ್ಶಕರು

ಡಾ. ಕೆ.ಜಿ.ಭಟ್‌ಸೂರಿ

ಸಹ ಪ್ರಾಧ್ಯಾಪಕರು





ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦

# ಮಾರ್ಗದರ್ಶಕರ ಪ್ರಮಾಣ ಪತ್ರ

"ಕುರುಗೋಡು ಪರಿಸರದ ಶಾಸನಗಳು ಮತ್ತು ದೇವಾಲಯಗಳು" ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಶ್ರೀ. ಶಶಿಧರ ಡಿ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 12-9-2010

ಡಾ. ಕೆ.ಜಿ.ಭಟ್‌ಸೂರಿ
ಸಹ ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

# ಸಂಶೋಧಕರ ಪ್ರಮಾಣ ಪತ್ರ

**"ಕುರುಗೋಡು ಪರಿಸರದ ಶಾಸನಗಳು ಮತ್ತು ದೇವಾಲಯಗಳು"** ಎಂಬ ನಿಬಂಧವನ್ನು ಸಹ ಪ್ರಾಧ್ಯಾಪಕರಾದ ಡಾ. ಕೆ.ಜಿ.ಭಟ್‌ಸೂರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 8.9.2010

Sam

**ಶಶಿಧರ ಡಿ.**
ಸಂಶೋಧಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

# ಕುರುಗೋಡು ಪರಿಸರದ ಶಾಸನಗಳು ಮತ್ತು ದೇವಾಲಯಗಳು

## : ಪರಿವಿಡಿ :

## ಅಧ್ಯಯನದ ಉದ್ದೇಶ, ಸ್ವರೂಪ ಹಾಗೂ ವಿಧಾನ

### ೧.೧. ಪೀಠಿಕೆ

ನಾಡಿನ ಚರಿತ್ರೆ ಆ ನಾಡಿನ ಜನರ ಜೀವನ ಸಿದ್ಧಾಂತಗಳನ್ನು ಬದುಕಿನ ಮೂಲೆ ಮೂಲೆಗಳನ್ನು ಪರಿಚಯಿಸುತ್ತದೆ. ಪ್ರಾಚೀನ ಐತಿಹಾಸಿಕ ಅಧ್ಯಯನ ಆ ನಾಡಿನ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಮೌಲ್ಯಗಳನ್ನು ತಿಳಿದುಕೊಳ್ಳಲು ಜನ ಜೀವನವನ್ನು ವಿಕಸನಗೊಳಿಸುವುದೇ ಆಗಿದೆ. ಕರ್ನಾಟಕದ ಸಂಸ್ಕೃತಿಯ ಹಿರಿಮೆಯನ್ನು ಪರಿಚಯಿಸಿದ ಹಲವಾರು ಪ್ರಾಚೀನ ಕುರುಹುಗಳಲ್ಲಿ ಕುರುಗೋಡು ಒಂದು ಗ್ರಾಮವಾಗಿದೆ.

ಕುರುಗೋಡು ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲ್ಲೂಕಿಗೆ ಸೇರಿದ ಒಂದು ಪಟ್ಟಣ. ಪ್ರಸ್ತುತ ಇದು ಜಿಲ್ಲಾ ಕೇಂದ್ರದಿಂದ ವಾಯುವ್ಯ ದಿಕ್ಕಿಗೆ ಸುಮಾರು ೨೮ ಕಿ.ಮೀ. ದೂರದಲ್ಲಿದೆ. ಐತಿಹಾಸಿಕ ದೃಷ್ಟಿಯಿಂದ ನೋಡಿದಲ್ಲಿ ಪ್ರಾಗಿತಿಹಾಸ ಕಾಲದ ರೇಖಾಚಿತ್ರಗಳು ಇಲ್ಲಿವೆ. ಕುರುಗೋಡು ಗ್ರಾಮ ತಾಮ್ರ ಶಿಲಾಯುಗ ಕಾಲಕ್ಕೆ ಸೇರಿದೆ ಎಂದು ಅ. ಸುಂದರರವರ ಅಭಿಪ್ರಾಯ. (ಸುಂದರ ಅ., ೧೯೯೪, ಪುಟ ೬೭) ಇತಿಹಾಸದಲ್ಲಿ ಕ್ರಿ.ಶ. ೨-೩ನೇ ಶತಮಾನಕ್ಕೆ ಸೇರಬಹುದಾದ ಕುರುಗೋಡು ಶಾತವಾಹನರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಶಾತವಾನಿವಾರ ಎಂದು ಕರೆಯಲಾಗಿದೆ. (ದೇವರಕೊಂಡಾರೆಡ್ಡಿ, ೧೯೯೮, ಪುಟ ೩೭೨) ಈ ಗ್ರಾಮ ಕಲ್ಯಾಣ ಚಾಲುಕ್ಯರ ಆಡಳಿತಕ್ಕೆ ಒಳಪಟ್ಟಿತ್ತು. ನಂತರ ಕಾಲಾನುಕ್ರಮೇಣ ಕಲ್ಯಾಣ ಚಾಲುಕ್ಯರ ಸಾಮಾಂತರಾದ ಕುರುಗೋಡು ಸಿಂದರು ಇದನ್ನೇ ರಾಜಧಾನಿ ಮಾಡಿಕೊಂಡು ಆಡಳಿತ ನಡೆಸಿದರು. (ಚನ್ನಬಸವಯ್ಯ ಹಿರೇಮಠ,

೧೯೯೮, ಪುಟ ೧೦೮) ಆಗ ನೊಳಂಬವಾಡಿ ೩೨೦೦೦, ಕದಂಬಗಳಿಗೆ ೧೦೦೦, ಕೋಗಳಿ ೨೬೦೦, ಬಲಕುಂದೆ ೩೦೦ ಇವು ಆಡಳಿತ ಕೇಂದ್ರ ಭಾಗಗಳು. ಇವುಗಳಲ್ಲಿ ಬಲಕುಂದೆ ೩೦೦ಕ್ಕೆ ಕುರುಗೋಡು ರಾಜಧಾನಿಯಾಗಿತ್ತು. ಈ ರಾಜಧಾನಿ ಪಟ್ಟಣವು ವಿಸ್ತೃತವಾಗಿ ಬೆಳೆಯಿತು. (ದೇವರಕೊಂಡಾರೆಡ್ಡಿ ಮತ್ತು ಕಲವೀರ ಮನ್ವಾಚಾರ್, ಕೆ.ಜಿ.ಭಟ್‌ಸೂರಿ, ಡಿ.ವಿ.ಪರಮಶಿವಮೂರ್ತಿ, ಪೂರ್ವೋಕ್ತ, ೧೯೯೮, ಪುಟ ೪೦)

ಸ್ಥಳನಾಮವನ್ನು ಚರ್ಚಿಸುತ್ತಾ ಚನ್ನಬಸವಯ್ಯ ಹಿರೇಮಠರವರು ಕುರುಗೋಡನ್ನು ಚಿಕ್ಕ ಶಿಖರವೆಂದು ಅರ್ಥೈಸಿದ್ದಾರೆ. (ಚನ್ನಬಸವಯ್ಯ ಹಿರೇಮಠ ಪೂರ್ವೋಕ್ತ, ೧೯೯೮, ಪುಟ ೧೦೮) ಮೊದಲು ದೊಡ್ಡಬಸವೇಶ್ವರನ ಕಡೆಗೆ ಹೋದರೆ, ಈ ಊರಿನ ಪ್ರಸಿದ್ಧ ದೈವವಾದ ದೊಡ್ಡ ಬಸವೇಶ್ವರನಿಗೆ ಕಿರಿದಾದ ಕೋಡುಗಳಿವೆ. ಈ ಕಿರು ಗೋಡಿನಿಂದಲೇ ಕಿರಿಗೋಡು ತದನಂತರ ಕುರುಗೋಡು ಎಂದಾಗಿದೆ.

### ೧.೨. ಕುರುಗೋಡು ಭೂ–ಭೌಗೋಳಿಕ ಪರಿಸರ:

ಕುರುಗೋಡು ಪರಿಸರದ ಶಾಸನಗಳು ಮತ್ತು ದೇವಾಲಯಗಳ ಬಗ್ಗೆ ತಿಳಿದುಕೊಳ್ಳುವ ಪೂರ್ವದಲ್ಲಿ ಕುರುಗೋಡಿನ ಭೂ–ಭೌಗೋಳಿಕ ಪರಿಸರದ ಹಿನ್ನೆಲೆಯನ್ನು ತಿಳಿದುಕೊಳ್ಳುವುದು ಸೂಕ್ತ.

### ನೆಲ:

ಕುರುಗೋಡು ಪ್ರದೇಶ ಒಟ್ಟು ಭೂಮಿಯ ವಿಸ್ತೀರ್ಣದ ಬಗ್ಗೆ ಹೇಳುವುದಾದರೆ ೧೧,೧೧೬೮೨ ಎಕರೆಗಳಿದ್ದು ಈ ಪ್ರದೇಶವು ಫಲವತ್ತಾದ ಕಪ್ಪು ಎರೆ ಮಣ್ಣಿನಿಂದ ಕೂಡಿರುತ್ತದೆ. (ಜಿ.ಯಂ.ಉಮಾಪತಿಶಾಸ್ತ್ರೀ, ಎಂ.ಎ., ೧೯೭೬, ಪುಟ–೨೦) ಇದಕ್ಕೆ ಪೂರಕವಾಗಿ ತೆಕ್ಕಲಕೋಟೆ, ಹಳ್ಳೂರಿನಲ್ಲಿ ಅಲ್ಬಿಝಿಯಾ ಆಕಾಶಿಯಾ ಗುಂಪಿಗೆ ಸೇರಿದ ಸಸ್ಯಗಳು ಇಲ್ಲಿ ಬೆಳೆಯುತ್ತಿದ್ದವು. ತೆಕ್ಕಲಕೋಟೆ, ಸಂಗನಕಲ್ಲು, ಹಳ್ಳೂರಿನಲ್ಲಿ ದೊರೆತಿರುವ ಇದ್ದಿಲಿನಿಂದ ಈ ಸಸ್ಯಗಳನ್ನು ಗುರುತಿಸಲಾಗಿದೆ. (ಅಭಿಶಂಕರ್ ಬಿ., ೧೯೭೨, ಪುಟ–೨೦೪) ಕುರುಚಲು ಗಿಡಗಳ ಪ್ರದೇಶದಿಂದ ಇದು ಆವೃತ್ತವಾಗಿದೆ. ಮಣ್ಣು ಫಲವತ್ತಾದರೂ ಮಳೆ ಕಡಿಮೆ. ಆದುದರಿಂದ ಇತ್ತೀಚಿನವರೆಗೆ ಒಣಬೇಸಾಯಕ್ಕೆ ಭೂ ಭಾಗ ಒಳಪಟ್ಟಿತ್ತು. ಆದರೆ ತುಂಗಭದ್ರಾ ಅಣೆಕಟ್ಟು ನಿರ್ಮಾಣದಿಂದ ತೋಡಿದ ಕಾಲುವೆಗಳಿಂದಾಗಿ ಇಂದು ಇವು ನೀರಾವರಿ ಭೂಮಿಯಾಗಿವೆ. ಇಲ್ಲಿ ದೊರೆಯುವ ಅದಿರು, ಖನಿಜ, ಶಿಲಾಸ್ತೋಮ ಮಣ್ಣು, ಸಸ್ಯಗಳು ಕೃಷಿಗೆ ಒಳಪಡಿಸಿದ ಮೂಲ ತಳಿಗಳ ಅಸ್ತಿತ್ವ ಇವೆಲ್ಲಾ ಒಕ್ಕಲು ಸಂಸ್ಕೃತಿಗೆ ಬೇಕಾದ ಸಂಪನ್ಮೂಲಗಳ ತಳಪಾಯವನ್ನು ಹಾಕಿವೆ. ಒಟ್ಟಾರೆ ಈ ಪ್ರದೇಶವು ಎರೆಮಣ್ಣಿನಿಂದ ಫಲವತ್ತಾಗಿದ್ದರೂ ಕಡಿಮೆ ಪ್ರಮಾಣದ ಮಳೆಯಿಂದಾಗಿ

ಈ ಪ್ರದೇಶದ ಸ್ಮಾರಕಗಳ ಮೇಲೆ ಪರಿಣಾಮ ಬೀರಿವೆ. (ಕೃಷ್ಣಮೂರ್ತಿ ಎಂ.ಎಸ್.೧೯೭೭, ಪುಟ-೧೦೮)

**ಕುರುಗೋಡಿನ ಹವಾಮಾನ:**

ಕುರುಗೋಡು ಪ್ರದೇಶವು ೧೫,೨೦,೫೫ ಅಕ್ಷಾಂಶ, ೭೬,೫೦,೧೭ ರೇಖಾಂಶವನ್ನು ಹೊಂದಿದೆ. ಈ ಪ್ರದೇಶವು ಸಮುದ್ರ ಮಟ್ಟದಿಂದ ಸುಮಾರು ೪೬೦ ಮೀ. ಎತ್ತರದಲ್ಲಿದೆ. ಅತಿ ಗರಿಷ್ಠವಾದ ಬೆಟ್ಟದ ಎತ್ತರ ೫೯೯ ಮೀಟರ್‌ಗಳು. ಇಡೀ ಬೆಟ್ಟಗಳು ಗ್ರಾನೈಟಿಕ್ ನೈಸ್ ಶಿಲೆಗಳಿಂದ ಕೂಡಿದೆ. ಇದರಲ್ಲಿ ಕೋಳಿಗುಡ್ಡದ ಕಲ್ಲಿನ ಸಮೂಹ ರೀತಿ ಹರಡಿದೆ. ಬೆಟ್ಟಗಳ ನಡುವೆ ಅಲ್ಲಲ್ಲಿ ಸಣ್ಣ ಬಯಲು ಪ್ರದೇಶ ಅಲ್ಲಲ್ಲಿ ತಗ್ಗು ಪ್ರದೇಶಗಳು ಹಿಂದೆ ನೀರಿನ ಪೂರೈಕೆಯ ತಾಣಗಳಾಗಿವೆ. ಕುರುಗೋಡು ಬೆಟ್ಟಗಳ ಸಮೂಹವನ್ನು ಅತಿ ಎತ್ತರದಿಂದ ಸುಮಾರು ೧೦೦೦ ಅಡಿಯಿಂದ ನೋಡಿದರೆ ಪೂರ್ವಾಭಿಮುಖವಾಗಿ ಕುಳಿತ ಬಸವನ ರೀತಿಯಂತೆ ಕಾಣುತ್ತದೆ. (ಚೆನ್ನಬಸವಯ್ಯ ಹಿರೇಮಠ, ೧೯೯೮, ಪುಟ-೯೯)

**ಮಳೆ, ಬೆಟ್ಟ-ಗುಡ್ಡಗಳು:**

ಬಳ್ಳಾರಿ ಜಿಲ್ಲೆಯ ಜೀವ ನದಿ ತುಂಗಭದ್ರ, ಸುಮಾರು ೬೩೦೦ ಎಕರೆ ಜಮೀನು ತುಂಗಭದ್ರೆಯ ಎಡದಂಡೆಯ ಮೇಲ್ಪಟ್ಟ ಮತ್ತು ಕೆಳದಂಡೆಯ ಮೇಲ್ಪಟ್ಟ ಕಾಲುವೆ ನೀರಾವರಿಗೆ ಒಳಪಟ್ಟಿರುತ್ತದೆ. (ಜಿ.ಎಂ.ಉಮಾಪತಿಶಾಸ್ತ್ರಿ, ಎಂ.ಎ. ೧೯೭೯, ಪುಟ-೨೦) ಕುರುಗೋಡು ಪ್ರದೇಶದಲ್ಲಿ ಪ್ರಾಚೀನ ಕಾಲದ ಕುರುಹುಗಳಿಂದ ಆವೃತವಾಗಿದೆ. ಈ ಕುರುಹುಗಳಲ್ಲಿ ಮಧ್ಯ ಶಿಲಾಯುಗದಿಂದ ಇಂದಿನವರೆಗೆ ಬದುಕಿನ ಅನೇಕ ಅಂಶಗಳು ಕಾಣಿಸಿವೆ. ಇತ್ತೀಚಿನ ದಿನಗಳಲ್ಲಿ ಕುರುಗೋಡಿನ ಪ್ರತಿ ಬೆಟ್ಟಕ್ಕೂ ಒಂದೊಂದು ಹೆಸರಿದೆ. ಅವುಗಳನ್ನು ಕಂದಾಯ ಇಲಾಖೆಯ ದಾಖಲೆಯಲ್ಲಿ ಜಿಲೆಲಿಕೊಂಡ, ಹನುಮನಕೊಂಡ, ನಿಶಾನಿಕೊಂಡ, ಆಲಬಾಯಿಕೊಂಡ, ರಾಮನಕೊಂಡ, ಐದು ಗುಡ್ಡಕೊಂಡ, ಜಿಂಕಲಕೊಂಡ, ಬೈರಿಕಲ್ಲು ಎಂದು ಹೆಸರಿಸಲಾಗಿದೆ. (ಬಾಲಸುಬ್ರಹ್ಮಣ್ಯ, ೨೦೧೦, ಪುಟ-೧) ಈ ಜಿಲ್ಲೆಯಲ್ಲಿ ಕೆಲವು ಬಿಡಿ ಬಿಡಿಯ ಬೆಟ್ಟಗಳ ಗುಂಪುಗಳಿವೆ. ಸಂಡೂರು ಬೆಟ್ಟಗಳ ಎತ್ತರಕ್ಕೆ ದರೋಜಿ ಬೆಟ್ಟಗಳಿವೆ. ಇದು ದರೋಜಿ ಗ್ರಾಮದ ಸಮೀಪ ಇದೆ. ದರೋಜಿ ಹಾಗೂ ಸಂಡೂರು ಬೆಟ್ಟಗಳ ನಡುವೆ ಕಣಿವೆ ಪ್ರದೇಶವಿದ್ದು ವ್ಯವಸಾಯಕ್ಕೆ ಅನುಕೂಲವಾಗಿದೆ. ಅಲ್ಲದೆ ಫಲವತ್ತಾದ ಭೂಮಿ ಹೊಂದಿದೆ. ದರೋಜಿ ಬೆಟ್ಟಗಳ ಸಾಲಿನ ನಡುವಿನ ಭೂಪ್ರದೇಶ ಕಣಿವೆ ವ್ಯವಸಾಯಕ್ಕೆ ಯೋಗ್ಯವಾಗಿದೆ.

ಕುರುಗೋಡು ಬೆಟ್ಟಗಳ ವಿಶೇಷತೆ ಎಂದರೆ ಈ ಬೆಟ್ಟಗಳು ಅಸಾಮಾನ್ಯ ಕಂದು ಇಲ್ಲವೆ, ಬೂದು ವರ್ಣದ ಗ್ರಾನೈಟ್ ಶಿಲಾವರ್ಗಕ್ಕೆ ಸೇರಿವೆ. ಈ ಪ್ರದೇಶದಲ್ಲಿ ಸಾಮಾನ್ಯವಾಗಿ ಇರುವ

ರೀತಿ ಅತಿ ಹೆಚ್ಚಿನ ಉಷ್ಣ ಶೀತಗಳಿಂದಾಗಿ, ಅಂದರೆ ಹವಾಗುಣದ ರೀತಿ ಅತಿ ಹೆಚ್ಚಿನ ಉಷ್ಣ ಶೀತಗಳಿಂದಾಗಿ, ಅಂದರೆ ಹವಾಗುಣದ ವೈಪರಿತ್ಯದಿಂದಾಗಿ ದೊಡ್ಡ ಬಂಡೆಗಳು ಸೀಳಿವೆ. ಹೀಗೆ ಬಿರುಕು ಬಿಟ್ಟು ಸೀಳಿದವುಗಳಲ್ಲಿ ಕೆಲವು ಮುಂಚಾಚಿನ ಕಲ್ಲಾಸರೆಗಳಾದರೆ ಕೆಲವು ಗುಹೆಗಳಾಗಿವೆ. ಸಹಸ್ರಾರು ವರ್ಷಗಳ ನಿರಂತರವಾದ ಸವಕಳಿಯಿಂದ ಗುಹೆಗಳು ಹೆಚ್ಚಾಗಿ ಕಂಡುಬಂದಿದ್ದು, ಇವು ಆದಿ ಮಾನವನ ವಸತಿಗೆ ಆಸರೆಯಾಗಿದ್ದವು. (ಕೃಷ್ಣಮೂರ್ತಿ ಎಂ.ಎಸ್., ೧೯೭೭, ಪುಟ-೧೧೦) ಬೆಟ್ಟಗಳಿಂದ ಸುತ್ತುವರಿದ ಎತ್ತರವಾದ ಭೂಪ್ರದೇಶ ಪ್ರಕೃತಿದತ್ತ ಸುರಕ್ಷತೆಯನ್ನು ನೀಡಿವೆ. ಈ ಪರಿಸರ ಆದಿ ಮಾನವರು ವಾಸಿಸುವುದಕ್ಕೆ ಯೋಗ್ಯವಾಗಿದೆ.

ಇಂತಹ ಬೆಟ್ಟಗಳ ಸಾಲಿನಲ್ಲಿ ನದಿ, ಸಣ್ಣ ನದಿ, ಹಳ್ಳಗಳು ಹರಿಯುವುದು ಸಾಮಾನ್ಯ ಈ ನೀರಿನ ಪ್ರದೇಶಗಳ ಆಸುಪಾಸಿನಲ್ಲಿ ಫಲವತ್ತಾದ ಮಣ್ಣಿನಿಂದ ಕಾಡು ಮತ್ತು ಕೃಷಿಗೆ ಯೋಗ್ಯವಾದ ಪ್ರದೇಶ ದೊರಕಿದೆ. ಆದಿಮಾನವನು ವ್ಯವಸಾಯಕ್ಕೆ ತೊಡುಗುವ ಮುನ್ನ ಇಲ್ಲಿ ಉತ್ತಮ ಸಸ್ಯ ವರ್ಗಗಳಿದ್ದು, ಈ ಪ್ರದೇಶ ಆತನ ಹಸಿವನ್ನು ಇಂಗಿಸುವ ಆಹಾರ ಪೂರೈಕೆಯ ಭಂಡಾರವಾಗಿತ್ತು. ವ್ಯವಸಾಯದ ಕಸುಬನ್ನು ಕರಗತ ಮಾಡಿಕೊಂಡ ನಂತರ ಈ ಸ್ಥಳಗಳಲ್ಲಿದ್ದ ಉತ್ತಮವಾದ ಭೂಮಿ ವ್ಯವಸಾಯಕ್ಕೆ ಆಸರೆಯಾಗಿದೆ. ಈ ತೆರನಾದ ಬದುಕು ಪ್ರಾಗೈತಿಹಾಸಿಕ ಚಿತ್ರಗಳಲ್ಲಿ ಬಿಂಬಿತವಾಗಿದೆ. (ಬಾಲಸುಬ್ರಹ್ಮಣ್ಯ, ೨೦೧೦, ಪುಟ ೪) ಒಟ್ಟಾರೆ ಈ ಪ್ರದೇಶದ ಭೌಗೋಳಿಕ ಪರಿಸರ ಇಲ್ಲಿನ ಸ್ಮಾರಕಗಳ ಮೇಲೆ ಪ್ರಭಾವ ಬೀರಿದೆ.

### ೧.೩. ಪೂರ್ವಧ್ಯಯಗಳ ಸಮಿಕ್ಷೆ:

ಕುರುಗೋಡಿಗೆ ಸಂಬಂಧಿಸಿದಂತೆ ಹಲವಾರು ಪ್ರಕಟಣೆಗಳು, ಪ್ರಬಂಧಗಳು ಮತ್ತು ಲೇಖನಗಳು ಹೊರಬಂದಿವೆ. (ಚನ್ನಬಸವಯ್ಯ ಹಿರೇಮಠ, ೧೯೯೫, ಪುಟ ೨೬೫-೨೮೬) "ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಕುರುಗೋಡು ಬಳ್ಳಾರಿ (ತಾ)" ಕೃತಿಯಲ್ಲಿ ಕುರುಗೋಡಿನ ಶಾಸನಗಳ ಬಗ್ಗೆ ತಿಳಿಸಲಾಗಿದೆ. (ಕ.ವಿ.ವಿ. ಶಾಸನ ಸಂಪುಟ-೧, ಶಾಸನ ಸಂ-೧೮) "ಕುರುಗೋಡು ಕ್ಷೇತ್ರದರ್ಶನ" ಕೃತಿಯಲ್ಲಿ ಕುರುಗೋಡಿನ ದೇವಾಲಯಗಳು ಮತ್ತು ಶಿಲ್ಪಗಳ ಬಗ್ಗೆ ಉಲ್ಲೇಖವಿದೆ. (ಹನುಮಂತರೆಡ್ಡಿ. ವೈ, ೧೯೯೧, ಪುಟ ೪-೩೫)

"ಐತಿಹಾಸಿಕ ಕುರುಗೋಡು" ಎಂಬ ಕೃತಿಯಲ್ಲಿ ಕುರುಗೋಡಿನ ಶಾಸನ ಮತ್ತು ದೇವಾಲಯಗಳ ಬಗ್ಗೆ ಮಾಹಿತಿ ನೀಡಲಾಗಿದೆ. (ಜಿ.ಎಂ. ಉಮಾಪತಿಶಾಸ್ತ್ರೀ, ೧೯೭೯, ಪುಟ ೧೩-೧೫) "ಕುರುಗೋಡು" ಕೃತಿಯಲ್ಲಿ ಶಾಸನಗಳು ಮತ್ತು ವಾಸ್ತು. ಮೂರ್ತಿ ಶಿಲ್ಪದ ಬಗ್ಗೆ ಉಲ್ಲೇಖಿಸಲಾಗಿದೆ. (ಬಾಲಸುಬ್ರಹ್ಮಣ್ಯ, ೨೦೧೦, ಪುಟ ೪೩-೮೭) "ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಸನ್ ix-i ಕುರುಗೋಡು ಬಳ್ಳಾರಿ (ತಾ)"ನ ಮೇಲೆ ಶಾಸನಗಳ ಬಗ್ಗೆ ಬೆಳಕನ್ನು

ಚೆಲ್ಲಿದೆ. (ಸೌ.ಇ.ಇ.**ix-i** ೯ನೆಯ ಶತಮಾನ, ಪುಟ-೫೩) "ಎಫಿಗ್ರಾಫಿಯಾ ಇಂಡಿಕಾ XIV" ಕೃತಿಯಲ್ಲಿ ಶಾಸನಗಳಲ್ಲಿ ದೇವರ ಸ್ತುತಿಯನ್ನು ಪ್ರಸ್ತಾಪಿಸಲಾಗಿದೆ. (ಎ.ಇ.XIV ಪುಟ-೨೬೫) "ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಸನ್ ix-i ಕುರುಗೋಡು ಪರಿಸರದ ಓರುವಾಯಿ ಶಾಸನಗಳ ಬಗ್ಗೆ ಉಲ್ಲೇಖಿಸಲಾಗಿದೆ. (ಸೌ.ಇ.ಇ.**ix-i** ೧೧೯೫, ಓರುವಾಯಿ, ಬಳ್ಳಾರಿ (ತಾ) ಪುಟ ೩೨೨) "ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಸನ್ ix-iರಲ್ಲಿ ಕೋಳೂರು ಪ್ರದೇಶದ ಶಾಸನಗಳನ್ನು ಪ್ರಕಟಿಸಲಾಗಿದೆ. (ಸೌ.ಇ.ಇ.**ix-i** ೧೧೪೭, ಕೋಳೂರು, ಬಳ್ಳಾರಿ (ತಾ) ಪುಟ ೨೪೯)

ಹೀಗೆ ಕುರುಗೋಡುನ ಪರಿಸರಕ್ಕೆ ಸಂಬಂಧಿಸಿದಂತೆ ಅಲ್ಲಲ್ಲಿ ಲೇಖನ, ಪ್ರಬಂಧಗಳು, ಪ್ರಕಟಣೆಗಳು ಮಾಹಿತಿಗಳು ಇದ್ದರೂ, ಪ್ರತ್ಯೇಕವಾಗಿ ಕುರುಗೋಡು ಮತ್ತು ಪರಿಸರದ ದೇವಾಲಯಗಳು ಮತ್ತು ಶಾಸನಗಳಿಗೆ ಸಂಬಂಧಿಸಿದಂತೆ ಪೂರ್ಣ ಪ್ರಮಾಣದಲ್ಲಿ ಅಧ್ಯಯನ ನಡೆದಿಲ್ಲ. ಆದ್ದರಿಂದ ಕುರುಗೋಡು ಪರಿಸರ ಅಂದರೆ ಕುರುಗೋಡು, ಓರುವಾಯಿ, ಕೋಳೂರು ಮತ್ತು ಮೋಕಾಗಳ ದೇವಾಲಯಗಳ ಶಾಸನಗಳು ಕುರಿತು ವ್ಯವಸ್ಥಿತ ಅಧ್ಯಯನ ಮಾಡುವುದೇ ಈ ಪ್ರಬಂಧದ ಮುನ್ನ ಉದ್ದೇಶವಾಗಿದೆ.

## ೧.೪. ಅಧ್ಯಯನದ ವ್ಯಾಪ್ತಿ:

ಕುರುಗೋಡು ಪರಿಸರದಲ್ಲಿ ಕಂಡುಬಂದ ಪ್ರಾಚೀನ ದೇವಾಲಯಗಳು ಮತ್ತು ಶಿಲ್ಪಗಳು, ಸ್ಮಾರಕಗಲ್ಲುಗಳು, ಶಾಸನಗಳು ಇನ್ನೂ ಮುಂತಾದ ಕುರುಹುಗಳನ್ನು ಗುರುತಿಸಿ ಪ್ರಕಟಿತ ಮತ್ತು ಅಪ್ರಕಟಿತ ಮಾಹಿತಿಯೊಂದಿಗೆ ಸಮಕಾಲೀನ ಸಂಸ್ಕೃತಿಯ ವಿವಿಧ ಮುಖಗಳನ್ನು ಪರಿಚಯಿಸುವುದು. ಕೆಲವು ಸಂದರ್ಭಗಳಲ್ಲಿ ವಿಷಯ ವಿಶ್ಲೇಷಣೆಯ ದೃಷ್ಟಿಯಿಂದ ಈ ಕುರುಗೋಡು ಪರಿಸರ ಅಂದರೆ ಕುರುಗೋಡಿನ ಸುತ್ತಮುತ್ತಲಿನಪ್ರಮುಖ ಗ್ರಾಮಗಳಾದ ಓರುವಾಯಿ, ಕೋಳೂರು ಮತ್ತು ಮೋಕಾಗಳು ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷವಾಗಿ ಸಹಾಯವಾಗುವ ಇತರೆಡೆಯ ಶಾಸನಗಳನ್ನು ಮತ್ತು ಸಮಕಾಲೀನ ಕೃತಿಗಳನ್ನು ಪೂರಕವಾಗಿ ಇಲ್ಲಿ ಇಟ್ಟುಕೊಂಡು ಇಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ.

## ೧.೫. ಅಧ್ಯಯನದ ವಿಧಾನ:

ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಮತ್ತು ವಿಷಯ ನಿರೂಪಣೆಯಲ್ಲಿ ಸಂಶೋಧನಾ ವಿಧಿ ವಿಧಾನಗಳನ್ನು ಅನುಸರಿಸಲಾಗಿದೆ. ಪ್ರಾರಂಭದಲ್ಲಿ ಕುರುಗೋಡು ಪರಿಸರ ಅಂದರೆ ಓರುವಾಯಿ, ಕೋಳೂರು ಮತ್ತು ಮೋಕಾಗಳ ಇತಿಹಾಸ, ಶಾಸನ ಮತ್ತು ದೇವಾಲಯಗಳ ಕುರಿತು ಈಗಾಗಲೇ ಪ್ರಕಟವಾಗಿರುವ ಕೃತಿ, ಲೇಖನ, ಪ್ರಕಟಣೆಗಳು ಮತ್ತು ಪ್ರಬಂಧಗಳನ್ನು ಪರಿಶೀಲಿಸಿ ಒಟ್ಟಿಗೆ ಅಕಾರಾದಿಯಲ್ಲಿ ಆಕರ ಕೃತಿಗಳ ಪಟ್ಟಿಯನ್ನು ತಯಾರಿಸುವುದು ಪ್ರಥಮ

ಆಧ್ಯತೆಯಾಗಿದೆ. ಕುರುಗೋಡು ಪರಿಸರದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ಶಾಸನಗಳು ಮತ್ತು ದೇವಾಲಯಗಳು ಶಿಲ್ಪ ಮತ್ತು ಸ್ಮಾರಕ ಶಿಲ್ಪಗಳ ವಿವರ ಸಂಗ್ರಹಿಸಿ ಪೂರ್ಣವಾದ ದಾಖಲೆಯೊಂದಿಗೆ ಅವುಗಳ ರೇಖಾಚಿತ್ರ ಮತ್ತು ಛಾಯಾಚಿತ್ರಗಳನ್ನು ಸಂಗ್ರಹಿಸಲಾಗಿದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದ ಪ್ರತಿಯೊಂದು ಪ್ರಾಚೀನ ದೇವಾಲಯದ ವಾಸ್ತು ರಚನೆಯನ್ನು ಅಧ್ಯಯನ ಮಾಡಿ ಅವುಗಳ ವಿನ್ಯಾಸ ಮತ್ತು ಮಾದರಿ (ಶೈಲಿ)ಗಳನ್ನು ಗುರುತಿಸಲಾಗಿದೆ. ನಂತರ ಅವುಗಳ ಗುಣಲಕ್ಷಣಗಳನ್ನು ತಿಳಿದು ಅವುಗಳ ವಾಸ್ತು ವಿವರಗಳನ್ನು ಚರ್ಚಿಸಿ ಮೊದಲು ವಾಸ್ತು ರಚನೆಯನ್ನು ಗರ್ಭಗೃಹದಿಂದ ಮುಖ ಮಂಟಪಾದವರೆಗಿನ ಒಳಭಾಗ ನಂತರ ಊರ್ದ್ವ ಮುಖ ವಾಸ್ತು ರಚನೆಯನ್ನು ಅಧಿಷ್ಠಾನದಿಂದ ಶಿಖರದವರೆಗಿನ ಹೊರಭಾಗ ಪರಿಶೀಲಿಸಿ ಅವುಗಳಲ್ಲಿರುವ ವಿವಿಧ ಉಪಾಂಗಗಳ ವಾಸ್ತು ಲಕ್ಷಣಗಳನ್ನು ಸೆರೆಹಿಡಿದು ವಿಶ್ಲೇಷಿಸಲಾಗಿದೆ. ಪ್ರಬಂಧದಲ್ಲಿ ದೇವಾಲಯಗಳಲ್ಲಿ ಮತ್ತು ಅವುಗಳ ಪರಿಸರದಲ್ಲಿ ಕಂಡುಬಂದ ಶಿಲ್ಪಮಾಧ್ಯಮ ಶೈಲಿ ಕಾಲಮಾನ ಮತ್ತು ಪ್ರತಿಮೆಯ ಲಕ್ಷಣಗಳ ಹಿನ್ನೆಲೆಯನ್ನು ಗಮನಿಸಿ ಅಧ್ಯಯನ ಇಲ್ಲಿ ಮಾಡಲಾಗಿದೆ.

ಸ್ಮಾರಕ ಶಾಸನಗಳ ಕುರಿತು ಚರ್ಚಿಸುವಾಗ ಅವುಗಳ ಮೇಲಿರುವ ಶಾಸನ ಹಾಗೂ ಉಬ್ಬು ಶಿಲ್ಪಗಳನ್ನು ಗಣನೆಗೆ ತೆಗೆದುಕೊಂಡು ವಿಷಯ ನಿರೂಪಣೆಗೆ ಅನುಗುಣವಾಗಿ ಅವುಗಳನ್ನು ವಿವಿಧ ಬಗೆಯಲ್ಲಿ ವಿಂಗಡಿಸಿ ಪರಿಶೀಲಿಸಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಮಾಹಿತಿಯನ್ನು ಮತ್ತು ಸ್ಥಳೀಯ ಶಾಸನೋಕ್ತ ದೇವಾಲಯಗಳನ್ನು ಕುರಿತು ಚರ್ಚಿಸುವಾಗ ಅವುಗಳ ಮಾಧ್ಯಮ ಮತ್ತು ಸಮಕಾಲೀನವಾಗಿ ಅವುಗಳ ಕಾಲಮಾನ ಮಾಡಲಾದ ವಿವರಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಹೀಗೆ ಮೂಲ ಮತ್ತು ಪೂರಕ ಆಕರಗಳಾದ ಶಾಸನ, ದೇವಾಲಯ, ಶಿಲ್ಪ, ಇತರೆ ಶಿಲ್ಪಗಳು ಅಥವಾ ಸ್ಮಾರಕಗಳು ಮೊದಲಾದ ವಿವರಗಳನ್ನೆಲ್ಲ ಪ್ರತ್ಯೇಕವಾದ ಪಟ್ಟಿಕೆಯಲ್ಲಿ ಸಂಗ್ರಹಿಸಿ ವಿಷಯಕ್ಕನುಸಾರವಾಗಿ ಹೊಂದಿಸಿಕೊಂಡು ಪ್ರಸ್ತುತ ಸಂಶೋಧನ ಪ್ರಬಂಧವನ್ನು ವ್ಯವಸ್ಥಿತವಾದ ರೀತಿಯಲ್ಲಿ ವಿನ್ಯಾಸಗೊಳಿಸುವ ಪ್ರಯತ್ನ ಮಾಡಲಾಗಿದೆ. (ವಿಷಯ ನಿರೂಪಣೆಯ ಸಂದರ್ಭದಲ್ಲಿ ಅವಶ್ಯಕವೆನಿಸಿದ ನಕ್ಷೆಗಳು, ರೇಖಾಚಿತ್ರಗಳನ್ನು ಕೊನೆಗೆ ಕೊಡಲಾಗಿದೆ.)

## ಶಾಸನಗಳ ಆಧಾರಿತ ಐತಿಹಾಸಿಕ ಹಿನ್ನೆಲೆ

### ೨.೧. ಪೀಠಿಕೆ:

"Inscription and History are two Faces of One Coin as same as" "Inscriptions are the main Source of History" ಶಾಸನಗಳು ಮತ್ತು ಇತಿಹಾಸ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಂದನ್ನು ಬಿಟ್ಟು ಮತ್ತೊಂದು ಇಲ್ಲ. ಅಂದರೆ ಶಾಸನಗಳಿಲ್ಲದೇ ಇತಿಹಾಸವಿಲ್ಲ. ಇತಿಹಾಸವಿಲ್ಲದೆ ಶಾಸನಗಳು ಇಲ್ಲ. ಶಾಸನಗಳು ಇತಿಹಾಸದ ಮೂಲ ಆಕರಗಳಾಗಿವೆ. ನಾಡಿನ ಇತಿಹಾಸವನ್ನು ನಿರ್ಮಿಸುವಲ್ಲಿ ಶಾಸನಗಳ ಪಾತ್ರ ಮಹತ್ವದ್ದು.

ಪ್ರಸ್ತುತ ಕುರುಗೋಡು ಚರಿತ್ರೆಗೆ ಸಂಬಂಧಿಸಿದಂತೆ ಈ ಪರಿಸರದ ಶಾಸನಗಳು ಸ್ಥಳೀಯವಾಗಿ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಲಭ್ಯವಾಗಿವೆ. ಗ್ರಾಮದ ಪರಿಸರದಲ್ಲಿ ಕಂಡುಬರುವ ಬೆಟ್ಟ ಹಾಗೂ ವಿಸ್ತೃತ ನಿಸರ್ಗ ನಿರ್ಮಿತ ಗುಹೆಗಳು ಪ್ರಾಚೀನ ಮಾನವರಿಗೆ ವಾಸಸ್ಥಾನ. ಅವರು ಕಲ್ಲಾಶ್ರಯಗಳಲ್ಲಿ ಬಿಡಿಸಿದ ಚಿತ್ರಗಳಿಗೆ ಬಳಸಿದ ಬಣ್ಣದಿಂದಲೇ ಮುಂದಿನ ಜನಾಂಗ ಶಾಸನ ಬರೆಯುವ ಶಕ್ತಿ ಪಡೆದುಕೊಂಡರೆಂದು ಅಂದರೆ ಉತ್ಪ್ರೇಕ್ಷೆಯಾಗಲಾರದು.

ಮುದ್ದುಗನ ಮೂಲೆ ಎಂದು ಕರೆಯಲ್ಪಡುವ ಕಲ್ಲಾಶ್ರಯದಲ್ಲಿ ಚಿತ್ರಿತ ಶಾಸನಗಳು ಕಂಡುಬಂದಿವೆ. ಇವುಗಳ ಬಗ್ಗೆ ೧೯೭೦ರಲ್ಲಿ ರಾಜಶೇಖರ ಮತ್ತು ಇತರರು 'ಇಂಡಿಯನ್ ಓರಿಯಂಟಲ್ ಕನ್ಫರನ್ಸ್'ದಲ್ಲಿ ಮಂಡಿಸಿದ್ದಾರೆ. 'ಮಾ' ಎಂಬ ಅಕ್ಷರ ಶಾತವಾಹನರ 'ನಮದೆವಸ್ಯ'

ಕದಂಬರ 'ಗುಣಹಿತರ್ಯ' ಎಂಬುದು ಬಾದಾಮಿ ಚಲುಕ್ಯರ ಕಾಲದೆಂದು ಸಂಶೋಧಕರ ಅಭಿಪ್ರಾಯವಾಗಿರುತ್ತದೆ. ಇತ್ತೀಚೆಗೆ ಇವುಗಳ ಕುರಿತು ಅಧ್ಯಯನ ಮಾಡಿದ ರಾಜಶೇಖರ ಅವರು 'ಮಾ' ಎಂಬುದು ಮೌರ್ಯರ ಕಾಲಕ್ಕೆ ಸೇರಿದ್ದೆಂದು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ.

## ೨.೨. ರಾಜಕೀಯ ವ್ಯವಸ್ಥೆ:

ಬಾದಾಮಿ ಚಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಹೊಯ್ಸಳರು, ವಿಜಯನಗರದ ಅರಸರು, ಪಾಳೆಯಗಾರರ ಆಳ್ವಿಕೆಗೆ ಕುರುಗೋಡ ಪ್ರದೇಶ ಒಳಪಟ್ಟಿತ್ತು. ಕ್ರಿ.ಶ. ೭ನೆಯ ಶತಮಾನದ ವೇಳೆಗೆ ಕುರುಗೋಡು ಬಾದಾಮಿ ಚಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತು. ಕುರುಗೋಡಿನ ಹನುಮಂತನ ಬೆಟ್ಟದ ಕತ್ತೆಬಂಡೆಯ ಶಾಸನದಲ್ಲಿ ಸತ್ಯಶ್ರಯನ ಉಲ್ಲೇಖವಿದೆ. ಇದರ ಕಾಲ ಲಿಪಿ ದೃಷ್ಟಿಯಿಂದ ೮ನೆಯ ಶತಮಾನಕ್ಕೆ ಸೇರಿದ್ದಾಗಿದೆ. ಈ ಮೇಲೆ ಹೇಳಿದ ಶಾಸನದಲ್ಲಿ ಕುರುಗೋಡಿನ ಭೂಮಿಯನ್ನು ಅಳೆಯಲು ಹದಿನೆಂಟು ಗೇಣಿನ ಕೋಲು ಮತ್ತು ನವಿಲು ಪೊನ್ನು ನಾಣ್ಯದ ಬಳಕೆಯನ್ನು ಕುರಿತು ತಿಳಿಸುತ್ತದೆ. ಸ್ಥಳೀಯರು ಇದನ್ನು ಕತ್ತೆಯ ಬಂಡೆ ಶಾಸನ ಎಂದು ಕರೆಯುತ್ತಾರೆ. ಕುರುಗೋಡು ಬೆಟ್ಟದ ಮುದ್ದುಗನ ಮೂಲೆ ಹತ್ತಿರ ಬಂಡೆಯೊಂದರ ಮೇಲೆ ಬಾದಾಮಿ ಚಲುಕ್ಯರ ಕಾಲಕ್ಕೆ ಸೇರುವ ಶಾಸನವನ್ನು 'ಗುಣಹಿತರು' ಎಂದು ಓದಲಾಗಿದ್ದು ಇದು ವ್ಯಕ್ತಿಯೊಬ್ಬನನ್ನು ಉಲ್ಲೇಖಿಸುತ್ತದೆ.

ಬಾದಾಮಿ ಚಲುಕ್ಯರ ನಂತರ ರಾಷ್ಟ್ರಕೂಟರು ಕುರುಗೋಡು ಪ್ರದೇಶವನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡರು ರಾಷ್ಟ್ರಕೂಟರ ದೊರೆ ಮೂರನೆಯ ಕೃಷ್ಣನ ಕ್ರಿ.ಶ. ೯೪೭ರ ಶಾಸನದಲ್ಲಿ ಕುರುಗೋಡಿನ ಮಹಾಜನರು ಕೊಟ್ಟಿತ್ತೊಣೆಯ ದೇಕಮ್ಮನ ದೇವಾಲಯಕ್ಕೆ ದಾನ ನೀಡಿದ ಉಲ್ಲೇಖವುಂಟು. ಕುರುಗೋಡು ಅಗ್ರಹಾರವಾಗಿದ್ದು ಮಹಾಜನರ ಆಡಳಿತದಲ್ಲಿತ್ತೆಂಬುದು ಗಮನಾರ್ಹ ಸಂಗತಿ.

ರಾಷ್ಟ್ರಕೂಟರ ನಂತರ ಅಧಿಕಾರಕ್ಕೆ ಬಂದ ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ಬಲಕುಂದೆ-೩೦೦, ನೊಳಂಬವಾಡಿ ೩೨೦೦೦, ಕದಂಬಳಿಗೆ ೧೦೦೦, ಕೋಗಳಿ ೫೦೦, ಕುರಿಯಹರವಿ ೭೦ ಮತ್ತು ಕರಿವಿಡಿ ೩೦ನ್ನು ಆಳುತ್ತಿದ್ದರು. ಕುರುಗೋಡು ಶಾಸನಗಳು ಸಿಂದರ ಆಡಳಿತದ ಮೇಲೆ ಬೆಳಕನ್ನು ಚೆಲ್ಲಿವೆ. ಸಿಂದರು ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದರು. ಸಿಂದ ವಂಶದ ಪ್ರಾಚೀನ ಅರಸನಾದ ಅರಿಬಲ್ಲದಾಗ್ರನನ್ನು ಕುಡುತಿನಿ ಶಾಸನ ಉಲ್ಲೇಖಿಸುತ್ತದೆ. ಕ್ರಿ.ಶ. ೧೧೪೯ರ ಕಲ್ಯಾಣ ಚಾಲುಕ್ಯ ಅರಸ ಜಗದೇಕ ಮಲ್ಲನ ಕಾಲದಲ್ಲಿ ರಾಜಮಲ್ಲ

ಮಹಾಮಂಡಳೇಶ್ವರನಾಗಿದ್ದ ಇಂದಿನ ದರೋಜಿ ಆಗಿನ ದೊರವಾದಿ-೭೦ನ್ನು ಕಾಚರಸ, ಲೋಕರಸ, ಗಂಗರಸರು, ನೋಡಿಕೊಳ್ಳುತ್ತಿದ್ದರು. ಈ ಶಾಸನದಲ್ಲಿ ಇಮ್ಮಡಿ ರಾಚಮಲ್ಲನನ್ನು 'ಕೃತಯುಗದ ಚರಿತ್ರೋದ್ಧರಣಂ' ಕಪ್ಪೆಯ ರಾಹಾರದಾನ 'ವಿನೋದ ಕೃತ' ಎಂದು ಕರೆಯಲಾಗಿದೆ. **(ಸೌ.ಇ.ಇ.IX-i ೧೧೪೯, ಪುಟ-೨೫೩)**

ಕಪ್ಪೆಯರನ್ನು ಕುರಿತು ಕೆಲವರು ಕಾಳಮುಖರೆಂದರೆ ಇನ್ನೂ ಕೆಲವರು ಈ ಪರಂಪರೆಯನ್ನು ಕಪ್ಪಡಿ ಸಂಗಮ (ಕೂಡಲಸಂಗಮ)ಕ್ಕೆ ತೆಗೆದುಕೊಂಡು ಹೋಗುತ್ತಾರೆ. ಕ್ರಿ.ಶ. ೧೧೪೮ರ ಕುಡತಿನಿ ಶಾಸನ ಕಾರ್ತಿಕೇಯನ ಉತ್ಸವ ಹೇಳುವಾಗ ಅಲ್ಲಿಗೆ ಬರುತ್ತಿದ್ದ ಕಪ್ಪಡಿಗಳ ಸತ್ರಕ್ಕೆ ದಾನ ಬಿಟ್ಟಿರುವುದನ್ನು ಉಲ್ಲೇಖಿಸಲಾಗಿದೆ. ಇಂದಿಗೂ ತಮಿಳು ನಾಡಿನಲ್ಲಿ ಶೈವ ಭಕ್ತರಾದ ಕೆಲವರು ಕೌಪಿನ, ಕವಡೆಗಳನ್ನು ಧರಿಸಿ ಮುಖಕ್ಕೆ ಮಸಿ ಬಳಿದುಕೊಂಡು ಸಿಂಗರಿಸಿದ ಕೋಲನ್ನು ಕೈಯಲ್ಲಿ ಹಿಡಿದು 'ಹರಿಹರ' ಎಂದು ಕುಣಿಯುತ್ತಾ ಮುರುಗನ ಗುಡಿಗೆ ಬರುತ್ತಾರೆ ಅವರಿಗೆ ದಾನ ನೀಡುವ ಮೂಲಕ ಮಹಾಶಿವ ಭಕ್ತನಾದ ರಾಚಮಲ್ಲ ಕಪ್ಪೆಯರಾಹಾರದಾನ ವಿನೋದ ಕೃತನೆಂದು ಕರೆಯಲಾಗುತ್ತದೆ.

ಕುರುಗೋಡು ಬೆಟ್ಟದ ಆಚೆಗಿರುವ ಉಜಾಳೇಶ್ವರ ದೇವಾಲಯದ ಪ್ರವೇಶದ್ವಾರದ ಇಕ್ಕೆಲಗಳಲ್ಲಿ ಚಾಮರ ಧಾರೆಯರ ಶಿಲ್ಪಗಳಿವೆ. ಒಂದರ ಕೆಳಗೆ ಲೋಕಾಹುರದ ಜೊ-ಲದೇವಿ ಎಂದು, ಇನ್ನೊಂದರ ಕೆಳಗೆ ಲೋಕಹುರದ ದೇವಲಗಿರಿ ಎಂಬ ಬರಹಗಳಿವೆ. **(ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೧, ಶಾ.ಸಂ.೧೩, ೧೪)**

ಒಂದನೆಯ ರಾಚಮಲ್ಲನ ಪತ್ನಿ ಸೋಮಲದೇವಿ ಮತ್ತು ಆತನ ಸೊಸೆ ಏಚಲದೇವಿಯರ ಶಿಲ್ಪಗಳಿರಬಹುದೆಂದು ವಿದ್ವಾಂಸರ ಅಭಿಮತ ಈ ಗ್ರಾಮದ ದೊಡ್ಡಬಸಪ್ಪ ದೇವಾಲಯದಲ್ಲಿರುವ ಕ್ರಿ.ಶ. ೧೫೧೨ರ ಶಾಸನದಲ್ಲಿ ಕುರುಗೋಡು ಬಸವಣ್ಣ ನಾಯಕರ ಮಕ್ಕಳು ಮಲ್ಲಪ್ಪ ನಾಯಕರ ಧರ್ಮಪತ್ನಿಯರಾದ ಮಲ್ಲಮ್ಮ ಎಂಬುವಳು ಕುರುಗೋಡು ಸೀಮೆಗೆ ಈಶಾನ್ಯ ದಿಕ್ಕಿನ ಹೊಜೆಹಾಳ ಶಾಂತಮಲ್ಲಿಕಾರ್ಜುನ ದೇವರ ದೇವಾಲಯ ಬಾವಿಯನ್ನು ಜೀರ್ಣೋದ್ಧಾರ ಮಾಡಿಸಿದ ಉಲ್ಲೇಖ ಕಂಡುಬರುತ್ತದೆ. ಈ ದೇವಾಲಯದ ಸುತ್ತಮುತ್ತ ಹಾಳುಗ್ರಾಮದ ಅವಶೇಷಗಳು ಹರಡಿರುವುದರಿಂದ ಹೊಜೆಹಾಳ ಗ್ರಾಮ ಇದೆ ಆಗಿರಬೇಕು. ಗ್ರಾಮ ಪಾಳು ಬಿದ್ದ ನಂತರ ಅದರ ನೆನಪು ಈ ದೇವಾಲಯದ ಹೆಸರಿನ ಮೂಲಕ ಮುಂದುವರೆದಿದೆ.




### ೨.೩. ಸಾಮಾಜಿಕ ವ್ಯವಸ್ಥೆ:

ಶಾಸನಗಳು ಅಂದಿನ ಸಮಾಜದ ಚಿತ್ರಣ ನೀಡುತ್ತವೆ. ಗ್ರಾಮದಲ್ಲಿ ಮಹಾಜನರು, ಸ್ಥಾನಚಾರ್ಯರು, ಮಹಾಪ್ರಧಾನ ಸೇನಾಪತಿ, ಕುಶಲಕರ್ಮಿಗಳು, ಕೃಷಿಕರು, ವ್ಯಾಪಾರಸ್ಥರು ಮೊದಲಾದವರು ಪ್ರತ್ಯೇಕ ಕೇರಿಗಳಲ್ಲಿ ವಾಸಿಸುತ್ತಿದ್ದರು. ಕುರುಗೋಡಿನ ಶಾಸನ ಬ್ರಾಹ್ಮಣರ ಓಣಿ, ಸೂಳೆಗೇರಿಗಳನ್ನು ಹೆಸರಿಸುತ್ತದೆ.

ಜಾತಿ ಪಂಥವನ್ನು ಮರೆತು ಹಬ್ಬ ಹರಿದಿನಗಳನ್ನು ಒಟ್ಟಾಗಿ ಆಚರಿಸುತ್ತಿದ್ದರು. ಆ ವೇಳೆಯಲ್ಲಿ ಅನೇಕ ದಾನದತ್ತಿಗಳನ್ನು ಬಿಡುವ ಪದ್ಧತಿ ರೂಢಿಯಲ್ಲಿತ್ತು. ಕುರುಗೋಡಿನ ಕಲ್ಲೇಶ್ವರ ದೇವಾಲಯದ ಮುಂದಿನ ಕಲ್ಯಾಣ ಚಾಲುಕ್ಯರ ಶಾಸನ ಉಲ್ಲೇಖಿಸುವಂತೆ ಉತ್ತಾರಾಯಣ ಸಂಕ್ರಮಣ ಕೃಷ್ಣಂಗಾರ ಚತುರ್ದಶಿ, ಸೋಮಪರಾಗ ಪುಣ್ಯಕಾಲ, ದ್ವಿತೀಯ ಶ್ರಾವಣ ಮಾರ್ಗಶಿರ, ಅಮವಾಸ್ಯೆ, ಸೂರ್ಯಗ್ರಹಣ, ದೀಪಾವಳಿ, ಯುಗಾದಿ, ಮಕರ ಸಂಕ್ರಾಂತಿ ಮೊದಲಾದ ಹಬ್ಬಗಳನ್ನು ಆಚರಿಸಲಾಗುತ್ತಿತ್ತು.

ಮಹಾಮಂಡಳೇಶ್ವರ ಎರಡನೇ ರಾಚಮಲ್ಲನು ಮಾರ್ಗಶಿರದ ಅಮವಾಸ್ಯೆ ಸೂರ್ಯ ಗ್ರಹಣದಂದು ಕುರುಗೋಡಿನ ಶ್ರೀಸ್ವಯಂಭು ದೇವರಿಗೆ ದಾನ ಕೊಟ್ಟಿದ್ದಾನೆ. ಇದೇ ಅರಸ ಕಾರ್ತಿಕ ಪುಣ್ಯಮಿ ಸೋಮವಾರ ಸೋಮಗ್ರಹಣದ ದಿನ ಶ್ರೀಪುರವನ್ನು ಅಗ್ರಹಾರವನ್ನಾಗಿ

ಮಾಡುವ ಕಾಲದಲ್ಲಿ ಬಾಲಶಿವ ದೇವರ ಕಾಲು ತೊಳೆದು ಸ್ವಯಂಭು ದೇವರಿಗೆ ಭೂದಾನ ಬಿಡುತ್ತಾನೆ. (ಉ.ಇ.XIV ಪುಟ-೨೬೫) ಬಸವರಾಜಯ್ಯ ಮಠದರವರು ಇದನ್ನು ತಪ್ಪಾಗಿ ಅರ್ಥೈಸಿಕೊಂಡಂತೆ ಕಾಣುತ್ತದೆ. ಅವರು ಹೇಳುವಂತೆ ಅಗ್ರಹಾರಗಳನ್ನು ಕೇವಲ ಬ್ರಾಹ್ಮಣರಿಗಷ್ಟೇ ದಾನ ಕೊಟ್ಟಿಲ್ಲ. ಎರಡನೆಯ ರಾಚಮಲ್ಲ ಕೊಟ್ಟಲ ಜಿಂತೆ ಗ್ರಾಮವನ್ನು ಅಗ್ರಹಾರವನ್ನಾಗಿ ಮಾಡಿ ಬಾಲಶಿವಚಾರ್ಯನಿಗೆ ಕೊಟ್ಟಿದ್ದಾನೆಂದು ಹೇಳಿದ್ದಾರೆ. (ಚನ್ನಬಸವಯ್ಯ ಹಿರೇಮಠ, ೧೯೯೫, ಪುಟ-೧೫೩) ಇಲ್ಲಿ ಅಗ್ರಹಾರವನ್ನಾಗಿ ಮಾಡಿದ್ದು, ಶ್ರೀಪುರವನ್ನು ಆ ವೇಳೆಯಲ್ಲಿ ಕೊಟ್ಟಲ ಜಿಂತೆ ಗ್ರಾಮವನ್ನು ಸ್ವಯಂಭು ದೇವರಿಗೆ ಕೊಡಲಾಗಿದೆ.

ಸಮಾಜದಲ್ಲಿ ಸಂಪ್ರದಾಯ ನಂಬಿಕೆಗಳು ಗಾಢವಾಗಿ ಬೇರೂರಿದ್ದವು. ರಾಚಮಲ್ಲನ ಮಹಾಪ್ರಧಾನನಾದ ಹಡಪವಳ ಬೀಚೆಯನು ಶಿವ ಸನ್ನಿಧಿ ಪಡೆದಾಗ ಅವನ ಪತ್ನಿಯರಾದ ಬೈಳಿಯಕ್ಕ, ಮೇಳ್ವಾಣಿಯಕ್ಕರು ಅಗ್ನಿ ಪ್ರವೇಶ ಮಾಡಿದರು. ಆ ವೇಳೆಯಲ್ಲಿ ಮಣಿಯಾರು ಸ್ಥಳದಲ್ಲಿ ತುಂಗಭದ್ರೆ ಸ್ಥಳದಲ್ಲಿ ಸೂಗುರು ಮೇರೆಯಲ್ಲಿ ಹರನಲ್ಲಿ ವಿನಂತಿ ಮಾಡಿಕೊಂಡು ಭೂಧಾನ ಕೊಟ್ಟರು. ಕುರುಗೋಡುಗೆ ಹತ್ತಿರ ಇರುವ ಮಣ್ಣೂರು ಗ್ರಾಮ ತುಂಗಭದ್ರ ನದಿದಂಡೆಯ ಮೇಲಿದೆ. ಇವರು ತುಂಗಭದ್ರ ನದಿ ದಂಡೆಗೆ ಬಂದು ಅಗ್ನಿ ಪ್ರವೇಶ ಮಾಡಿ ಅದೇ ಸ್ಥಳದಲ್ಲಿ ಭೂದಾನ ಬಿಟ್ಟಿದ್ದಾರೆ.

ಅಂದಿನ ಜನರು ವಿವಿಧ ಸಾರ್ವಜನಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದರು. ಇದರಿಂದಾಗಿಯೇ ಸಾಮಾಜಿಕವಾಗಿ ಅನೇಕ ಕ್ರಾಂತಿಕಾರಿ ಬದಲಾವಣೆಗಳಾಗುತ್ತಾ ಬಂದಿವೆ. ಇದಕ್ಕೆ ಧರ್ಮವೂ ಕೂಡ ಪ್ರೇರಣೆ ನೀಡಿದೆ. ದೇವಾಲಯ, ಮಠ, ಕೆರೆಬಾವಿ, ಛತ್ರಗಳನ್ನು ನಿರ್ಮಿಸಿ ಅವುಗಳಿಗೆ ದಾನದತ್ತಿಗಳನ್ನು ಬಿಡುವ ಮೂಲಕ ತಮ್ಮ ಔದರ್ಯವನ್ನು ಮೆರೆದಿದ್ದಾರೆ. ದೇವಾಲಯ, ಮಠ, ಸತ್ರ, ಛತ್ರಗಳ ಮೂಲಕ ವಿದ್ಯಾದಾನಕ್ಕೆ ಸಹಾಯ ಮಾಡಿದರೆ, ಕೆರೆಬಾವಿಗಳ ಮೂಲಕ ನಾಡಿನ ಸಾಮಾಜಿಕ, ಆರ್ಥಿಕ ಪ್ರಗತಿ ಉಂಟಾಗುತ್ತಿತ್ತು ಎಂದು ಹೇಳಬಹುದು. ಕೋಳೂರಿನ ಚೌಡಯ್ಯನ ಕೆರೆ, ಕುರುಗೋಡಿನ ಪುಂಡರೀಕನ ಕೆರೆ, ಮಂಜಿಮರಸನ ಕೆರೆ, ಬಡಗಣರಳಿಯ ಕೆರೆ, ಕುಡುತಿನಿಯ ಸೆಟ್ಟಿಯ ಕೆರೆ, ಗಂಜಿಗೆರೆ, ಮೊದಲಾದವುಗಳು ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಕೋಳೂರಿನಲ್ಲಿ ರೇವಗಾವುಂಡನು ಚಾರು ಶಿವಗೃಹವಿರುವ ಸ್ಥಳದ ಕಾಲದಲ್ಲಿ ತಣ್ಯೇಳಲ್ಗಳಿಂ ತಿಳಿ ನೀರಿಂದೊಡವಿದ ತಟಾಕವೊಂದಂಮುದದಿಂದ ಕಟ್ಟಿಸಿದನು. (ಸೌ.ಇ.ಇ.IX-i ೧೧೪೭, ಪುಟ-೨೪೯) ಅವನು ಒಂದು ಬಾವಿ, ನಾಲ್ಕು ಶಿವಗೃಹಗಳನ್ನು ಕಟ್ಟಿಸಿದ್ದಾನೆ. ಕುರುಗೋಡು ಪಟ್ಟಣದಲ್ಲಿ ಕಲ್ಲಿಶೆಟ್ಟಿ ಶೀತಳಬಾವಿಯನ್ನು ಅಗೆಸಿದ್ದ. (ಸೌ.ಇ.ಇ.IX-i ೧೧೭೬, ಪುಟ-೨೯೬) ಇವನು ನಿರ್ಮಿಸಿದ ಅರವಟ್ಟಿಗೆಗೆ ಬಳ್ಳಾರಿಯ ಅಜ್ಜರಸ ದತ್ತಿ

ಬಿಟ್ಟಿದ್ದಾನೆ. ಈ ರೀತಿಯಾಗಿ ಸಾರ್ವಜನಿಕರಿಗೆ ಉಪಯುಕ್ತವಾಗಿ ಕೈಗೊಂಡ ಅನೇಕ ಕಾರ್ಯಗಳಿಗೆ ಶಾಸನ ಸಾಕ್ಷಿ ನೀಡಿವೆ.

## ೨.೪. ಆರ್ಥಿಕ ವ್ಯವಸ್ಥೆ:

ಸಮಾಜದ ಪ್ರಮುಖವಾದ ಅಂಗ ಆರ್ಥಿಕ ವ್ಯವಸ್ಥೆ ಪ್ರಾಚೀನ ಕಾಲದಾಲ್ಲಿ ಸೈನ್ಯದಷ್ಟೆ ಪ್ರಮುಖವಾಗಿತ್ತು. ಉಳಿದ ಕ್ಷೇತ್ರಗಳ ಸ್ಥಿತಿಗತಿ ಆರ್ಥಿಕತೆಯನ್ನು ಅವಲಂಬಿಸಿ ವ್ಯವಸ್ಥೆಗೊಂಡಿದ್ದವು.

ಭೌಗೋಳಿಕ ಹಿನ್ನೆಲೆಯಲ್ಲಿ ಬೆಟ್ಟ, ಖನಿಜ, ಕಾಡು ಮತ್ತು ವಿವಿಧ ಮಣ್ಣಿನ ಸ್ವರೂಪಗಳನ್ನೊಳಗೊಂಡ ಭೂಮಿಯನ್ನು ಕುರಿತು ಉಲ್ಲೇಖಿಸಲಾಗಿದೆ. ಪ್ರಾಚೀನ ಶಾಸನಗಳು ಭೂಮಿಯನ್ನು ಸಾಮಾನ್ಯವಾಯಿಕೆಯಿ ಎಂದು ಕರೆಯಲಾಗಿವೆ. ಮಣ್ಣಿನ ಸ್ವರೂಪವನ್ನು ಗಮನಿಸಿ ಇಲ್ಲಿಯ ಶಾಸನಗಳಲ್ಲಿ ತಕ್ಕಿಲ ಮತ್ತರು, ಸೌಳ್‌ಭೂಮಿ ಏರಿಯಹೊಲ, ಕರಿಯ ಭೂಮಿ, ಕೆಂಗಾಡು, ಹರಳು ಮತ್ತಾರು, ಮುಂತಾಗಿ ಕರೆಯಲಾಗಿದೆ. ಭೂಮಿ ಊಳುವ ರೈತಾಪಿ ವರ್ಗವನ್ನು ಒಕ್ಕಲು ಮಕ್ಕಳೆಂದು ಹೆಸರಿಸಿದ್ದು, ಅವರನ್ನು ಧನದ ಧಾನ್ಯದ ಸೊಮ್ಮಿನ ಸೊಕ್ಕಿನಿಂದ ಮಾರ್ಗ್ಗಳ ದೊರೆ ನಮ್ಮಾಳೆಂಬ ಕುಡಿಯಾಕ್ಕಲ ಮಕ್ಕಳಿನೊರ್ಗ್ಗಳೊಪ್ಪುಗಂ ಎಂದು ವರ್ಣಿಸಲಾಗಿದೆ. **(ಸೌ.ಇ.ಇ.IX-i ೧೧೭೭, ಪುಟ-೨೯೭)**

ಭೂ ಒಡೆತನ ಸರ್ಕಾರ, ಸಂಘ ಸಂಸ್ಥೆ, ದೇವಸ್ಥಾನ ವ್ಯಕ್ತಿಗಳಿಗೆ ಸೇರಿತ್ತು. ಕುರುಗೋಡಿನ ಬಸವೇಶ್ವರ ದೇವಾಲಯದ ಕಲ್ಯಾಣ ಚಾಲುಕ್ಯರ ಶಾಸನಗಳಲ್ಲಿ ಬರುವ ದೇವರಕೆಯ, ಮುದ್ದೇಶ್ವರ ದೇವರತೋಟ, ಮಂಜೇಶ್ವರದಕೆಯಿ, ಪರಂಜ್ಯೋತಿ ದೇವರಕೆಯಿ, ಶಾಂತಮಲ್ಲಿಕಾಜುನ ದೇವರ ಬಾವಿ ಹೂವಿನ ತೋಟ, ಸೂರ್ಯ ದೇವರಕೆಯ್, ತ್ರೈಪುರಷರ ದೇವರ ತೋಟ ಮುಂತಾಗಿ ಉಲ್ಲೇಖಗಳು ಬರುತ್ತವೆ.

ಕುಶಲಕರ್ಮಿಗಳಲ್ಲಿ ಬಡಗಿ, ಕಮ್ಮಾರ, ಶಿಲ್ಪಿ, ಕಂಚುಗಾರ, ಅಕ್ಕಸಾಲಿ, ತೆಲ್ಲಿಗ, ನೇಕಾರ, ಚಮ್ಮಾರ, ವಿವಿಧ ವರ್ಗಗಳು ಉತ್ಪಾದನೆಯಲ್ಲಿ ತೊಡಗಿಕೊಂಡಿದ್ದವು. ಉತ್ಪಾದನಾ ವಸ್ತುಗಳನ್ನು ವ್ಯಾಪಾರ ವೃತ್ತಿಯಾಗಿಸಿಕೊಂಡವರನ್ನು ಸೆಟ್ಟಿಗಳೆಂದು ಕರೆಯಲಾಗಿದೆ. ಇವರಲ್ಲಿ ಬಣಜಿಗ, ನಕರ, ಮುಮ್ಮರಿದಂಡ, ವಡ್ಡ ವ್ಯವಹಾರಿ, ನಾನಾದೇಶಿ, ಉಭಯ ನಾನಾದೇಶಿ, ಗವರೆ, ಗಾತ್ರಿಗ ಮೊದಲಾದ ಹೆಸರಿನಿಂದ ಗುರುತಿಸಿಕೊಂಡಿದ್ದಾರೆ. ಈ ವರ್ತಕರು ತಮ್ಮದೇ ಆದ ಸಂಘಗಳನ್ನು ಕಟ್ಟಿಕೊಂಡಿದ್ದರು. ಇದರಲ್ಲಿ ಅಯ್ಯವಳೆಯಯ್ನೂರ್ವರ ಸಂಘ ಪ್ರಮುಖವಾದದ್ದು. ಕುರುಗೋಡು ಪಟ್ಟಣ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಶ್ರೀಮಂತ ವರ್ಗಕ್ಕೆ ಸೇರಿದ ಇಲ್ಲಿಯ ಶೆಟ್ಟಿಗಳು ಶೈವಭಕ್ತರಾಗಿದ್ದರು. ಯಾರೊಬ್ಬರ ಮುಲಾಜಿಗೆ ಅಂಜುತ್ತಿರಲಿಲ್ಲ. ತೋಟಿಯಂದಡೆ

ಕೋಟಿ ಲಾಭವೆಂದು ಅನ್ನುತ್ತಿದ್ದ ಇವರು ಭೂವನದೊಳ್ ಕುಷ್ಠರಿಪು ಕುಳ ಸೈನ್ಯಸಾಧಕರಾಗಿದ್ದರು. ಗವರೇಶ್ವರನ ಆರಾಧಕರು ವ್ಯವಹಾರ ಪ್ರವೀಣರು, ಪರಾಕ್ರಮಿಗಳು, ಪರೋಪಕಾರಶೀಲರು, ಸರ್ವಧರ್ಮ ಸಮಾನ ಬುದ್ಧಿಯುಳ್ಳವರು ಆಗಿದ್ದರು. ಇವರನ್ನು ಕುರಿತು ಶಾಸನ "ತತ್ಪುರವಾಸಿಗಳಪ್ಪ ಮುಂಮರಿದಂಡಗಳು ಗವರೇಶ್ವರ ಪದ ಪದ್ಮ ಷಟ್ಚರಣರುಂ ವಿಸ್ತೀರ್ಣ ವಸ್ತುಗುಣ ವಿನಿಹಿತಾ ಪಂಚಶತ ವೀರಶಾಸನ ಗುಣೋದ್ಧಾರಣರುಂ ನವರತ್ನ ವಾಹನ ಪರೀಕ್ಷಾನವದ್ಯರುಂ ಶರಣೆಂದು ಕಂಡರಂ ಕರುಣದಿಂ ಕಾವರಂ ಬಿರುದಿಂಗೆ ಬೀಗುವರ ಹರಣವಂ ಸೋವರಂ ತೋಟಿಯಂದಡೆ ಕೋಟಿ ಲಾಭವೆಂದುಲಿವರುಂ ಆಟಂದ ಬವರಕ್ಕೆ ನಾಟಕಂ ನಲಿವರುಂ ಅಯ್ಯವೊಳೆಯ ತಳದಿನಿದು ವೆನ್ನೆರ್ಗ್ಗಿವಿದೆನಿ ಪದಯ್ಯ ಮದ್ವಾರಾವಲೇಪುರಕೆಕು ಅಂವೆನಿಪ ಕುರುಗೋಡು ತಳದೊಳಗೆ ತಳರದ ಯೂರ್ವ್ವರುಂ ಎಂದು ಉಲ್ಲೇಖಿಸಲಾಗಿದೆ. (ಸೌ.ಇ.ಇ.IX-i, ೧೧೭೬, ಪುಟ ೨೯೬)

ಹಾವಿನಾಳ ಕಲ್ಲಿಸೆಟ್ಟಿ ಅಥವಾ ಕಲಿದೇವ ಸೆಟ್ಟಿ ಪರಮ ಶಿವಭಕ್ತನಾಗಿದ್ದ ಇವನ ಪೂರ್ವಿಕ ಕೇಟಿಸೆಟ್ಟಿ ಸಿಂದವಾಡಿ ನಾಡಿನ ಮುದುನೂರಿನವಾಗಿದ್ದ. ಇಂದಿನ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮುದುನೂರು ಆಗಿರಬೇಕು. ಎಂ.ಎಂ. ಕಲಬುರ್ಗಿಯವರು ಈ ವ್ಯಕ್ತಿ ಹಾವಿನಾಳ ಕಲ್ಲಯ್ಯನಾಗಿರಬಹುದು ಎಂಬ ಭಾವನೆ ಮೂಡುತ್ತದೆ ಎಂದು ಹೇಳಿದ್ದಾರೆ. (ಕಲಬುರ್ಗಿ ಎಂ.ಎಂ. ೧೯೭೦, ಪುಟ–೮೯–೯೦) ಇಲ್ಲಿ ಕರೆಯಲಾದ ಹಾವಿನಾಳ ಕೂಡ ಹಾವಿನಾಳ ವೀರಾಪುರ ಎಂಬ ಗ್ರಾಮ ಕುರುಗೋಡು ಪಕ್ಕದಲ್ಲಿಯೇ ಇದೆ. ಹೀಗಾಗಿ ಅಂದಿನ ಕಾಲದಲ್ಲಿ ಕುರುಗೋಡು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು.

ಕುರುಗೋಡಿಗೆ ಹತ್ತಿರವಿರುವ ಓರುವಾಯಿಯಲ್ಲಿ ಅಂಬಲಿಯ್ಯಚ ಎಂಬ ವ್ಯಾಪಾರಸ್ತನಿದ್ದ. (ಸೌ.ಇ.ಇ.IX-i ೧೧೯೫, ಪುಟ–೩೨೨) ಅವನು ಕುಂತುನಿಭ ರೂಪಗುಣವಂತ ನೆನಸಿದ್ದ ಈತನ ಮಗ ಏಚನು ಓರುವಾಯಿಯಲ್ಲಿ "ಕನಕಾದ್ರಿಯಲ್ಲಿನ ಗಡದು ಕಂಡರಿಸಿದ ವೊಲ್ ವಿಘ್ನೇಶ್ವರ"ನ ಪ್ರತಿಷ್ಠೆ ಮಾಡಿ ಅದಕ್ಕೆ ಸಮಸ್ತ ಧನವನ್ನು ನೀಡಿದ್ದಾರೆ. ದೇವ ಬ್ರಾಹ್ಮಣರ ಪಾದಾರಾಧಕರೆಂದು ಕರೆದುಕೊಂಡಿರುವ ಇವರ ವಂಶಸ್ಥರು ವ್ಯಾಪಾರಸ್ತರಾಗಿ ವಿಭಾಗದ ಆಡಳಿತಾಧಿಕಾರಿಗಳಾಗಿ ದಾನಧರ್ಮ ಮಾಡುವ ಮೂಲಕ ಸಮಾಜದಲ್ಲಿ ಪ್ರಭಾವ ಬೀರಿದ್ದಾರೆ.

## ೨.೫. ಧಾರ್ಮಿಕ ವ್ಯವಸ್ಥೆ:

ಕುರುಗೋಡು ಪಟ್ಟಣದಲ್ಲಿ ಕಂಡುಬಂದಿರುವ ಅವಶೇಷಗಳನ್ನು ಗಮನಿಸಿದರೆ ಶೈವಧರ್ಮ ಮುಂಚೂಣಿಯಲ್ಲಿತ್ತು. ೧೨ನೆಯ ಶತಮಾನದಲ್ಲಿ ಉಗಮಗೊಂಡ ಶರಣಧರ್ಮ ಇಲ್ಲಿ ಹೆಚ್ಚು ಪ್ರಚಲಿತವಿತ್ತು.

## ಶೈವಧರ್ಮ

ಕುರುಗೋಡು ಗ್ರಾಮದಲ್ಲಿ ಶೈವಧರ್ಮಕ್ಕೆ ಸಂಬಂಧಿಸಿದಂತೆ ದೇವಾಲಯಗಳು ಹೆಚ್ಚಿನ ಪ್ರಮಾಣದಲ್ಲಿವೆ. ಇವುಗಳ ಶೈಲಿ ಒಂದೇ ರೀತಿಯಾಗಿರುವುದನ್ನು ಗಮನಿಸಿದರೆ ಇವೆಲ್ಲವೂ ಸಿಂದರ ಆಳ್ವಿಕೆಯ ಕಾಲದಲ್ಲಿಯೇ ರಚನೆಯಾಗಿರಬೇಕು. ದೇವಾಲಯಗಳನ್ನು ಕಟ್ಟಿಸಿ ಅವುಗಳ ವ್ಯವಸ್ಥೆಯನ್ನು ನೋಡಿಕೊಳ್ಳಲು ಕಾಳಮುಖಯತಿಗಳನ್ನು ನೇಮಕ ಮಾಡಲಾಗುತ್ತಿತ್ತು. ಬಳ್ಳಾರಿ ಪ್ರದೇಶದಲ್ಲಿ ಈ ಕಾಳಾಮುಖರನ್ನು ಉಲ್ಲೇಖಿಸುವ ಕ್ರಿ.ಶ. ೧೦೩೩ ದಮ್ಮೂರು-ಕಗ್ಗಲ್ಲು ಪ್ರಾಚೀನ ಶಾಸನದಲ್ಲಿ ಮಹಾದೇವ ದೇವರ ಸ್ಥಾನಾಚಾರ್ಯ ಉತ್ತಮ ರಾಶಿ ಪಂಡಿತರಿಗೆ ದಾನ ಕೊಡಲಾಗಿದೆ ಎಂದಿದೆ. ಇದರ ನಂತರ ಕುರುಗೋಡು ಪಕ್ಕದಲ್ಲಿರುವ ಕ್ರಿ.ಶ. ೧೦೫೪ರ ಓರುವಾಯಿ ಶಾಸನದಲ್ಲಿ ತ್ರಿಲೋಕ ಪಂಡಿತರ ಸಿದ್ಧಯ್ಯನ ಉಲ್ಲೇಖವಿದೆ. (ಸೌ.ಇ.ಇ.IX-i, ೧೧೭೬, ಪುಟ ೨೯೬) ಕ್ರಿ.ಶ. ೧೧೪೪ರ ವೇಳೆಯಲ್ಲಿ ಓರುವಾಯಿಯ ಕಲಿದೇವ ದೇವಾಲಯದ ಸ್ಥಾನಚಾರ್ಯನಾಗಿ ಭೀಮರಾಶಿ ಪಂಡಿತನಿದ್ದ (ಸೌ.ಇ.ಇ.IX-i, ೧೧೪೪, ಪುಟ ೨೫೩) ಇವನು ಚಳೇಶ್ವರ ಪಂಡಿತರ ಮಕ್ಕಳೆಂದು ಹೇಳಿಕೊಂಡಿದ್ದಾನೆ. ಭೀಮರಾಶಿ ಪಂಡಿತನು ಓರುವಾಯಿಯ ಕಲಿದೇವ ದೇವಾಲಯದೊಂದಿಗೆ ಕುತನೂರ ವಿರೂಪಾಕ್ಷ ದೇವರು ಮತ್ತು ಕುರುಗೋಡು ಭೋಗೇಶ್ವರ ದೇವರ ದೇವ ಸ್ಥಾನವನ್ನು ನೋಡಿಕೊಳ್ಳುತ್ತಿದ್ದನು.

ಕುರುಗೋಡು ಶ್ರೀ ಸ್ವಯಂಭು ದೇವರ ಸ್ಥಾನಾಚಾರ್ಯನಾಗಿ ಬಾಲ ಶಿವಾಚಾರ್ಯನಿದ್ದ ಅವನನ್ನು ಕುರಿತ ಶಾಸನ (ಎ.ಇ.XIV, ಪುಟ ೨೬೫) ಶಿವಪೂಜಾ ತತ್ಪರನಾದ ಇವನು "ಆಲಕುಳೀಶ್ವರಾಗಮ ಕಾಳಾಮುಖ ದರ್ಶನಂಗಳನ್ತಾಳ್ದಿ ತಮೋ ಲೀಲೆಗೆ ಮೈವಾಂತಿ ತರ್ಪ್ಪಂ ಬಾಲಶಿವಾಚಾರ್ಯವರ್ಯ್ಯನಗಣಿತ ಧೈರ್ಯನ್" ಎಂದಿದೆ. ಕ್ರಿ.ಶ. ೧೧೭೬ರಲ್ಲಿ ಕಲ್ಲಿಶೆಟ್ಟಿ ಎಂಬುವನು ಕುರುಗೋಡಿನಲ್ಲಿ ಪ್ರತಿಷ್ಠಾಪಿಸಿದ ಕಲ್ಲೇಶ್ವರ ದೇವಾಲಯಕ್ಕೆ ಅಮೃತರಾಶಿದೇವನು ಸ್ಥಾನಾಚಾರ್ಯನಾಗಿದ್ದನು (ಎ.ಇ.XIV, ಪುಟ ೨೭೯) ಎಂದು ಶಾಸನ ಉಲ್ಲೇಖಿಸಿದೆ.

ಕುರುಗೋಡು ಸಿಂದವಂಶದ ಅರಸರಲ್ಲಿ ಮೊದಲನೆಯ ರಾಚಮಲ್ಲ ಮತ್ತು ಎರಡನೆಯ ರಾಚಮಲ್ಲರು ಮಹಾಶಿವಭಕ್ತರಾಗಿದ್ದರು. ಮೊದಲನೆಯ ರಾಚಮಲ್ಲನನ್ನು ಶಾಸನಗಳು ಶಿವಪಾದ ಶಿಖಾಮಣಿ ಶಿವೈಕ್ಯ ಚೂಡಾಮಣಿ, ಆರ್ಚಿತ ಶಿವಪಾದನೆಂದಿವೆ, ವಚನಕಾರ ಉಳಿಯಮೇಶ್ವರ ಚಿಕ್ಕಯ್ಯನಿಗೆ ದಾನ ಬಿಡುವಾಗ ಶಿವಪಾದ ಶೇಖರ ಮಹೇಶ್ವರಂ ಎಂದು ಶಾಸನದಲ್ಲಿ ವರ್ಣಿಸಿದೆ. ಭಕ್ತರ ಪಿರಿದು ಮನ್ನಿಸುತ್ತಾ ಅನೇಕ ದಾನ ದತ್ತಿಗಳನ್ನು ಬಿಡುವ ಮೂಲಕ ಅವರನ್ನು ಸಂತೃಪ್ತಿಪಡಿಸುತ್ತಿದ್ದನು. ಈ ರಾಚಮಲ್ಲನನ್ನು ಮೆಚ್ಚಿಕೊಂಡ ಶಿವನು ತನ್ನ

ಪರಿವಾರದೊಂದಿಗೆ ಬಂದು ಪ್ರತ್ಯಕ್ಷನಾದನಂತೆ. ಆಗ ರಾಚಮಲ್ಲನು ಮಹಾವಿಭೂತಿಯಿಂ ಗಣಾಡಂಬರವಂ ಮಾಡಿ ಶಿವಾರ್ಚನೆಯ ಮಾಡಿ ಶಿವನಲ್ಲಿ ತನ್ನ ಶರೀರವನ್ನು ಬೆರಸಿ ಕುರುಗೋಡು ಪಟ್ಟಣದ ಸ್ವಯಂಭು ದೇವರ ಪಶ್ಚಿಮಾಭಿಮುಖದೊಳ್ ಬಂದು ನಿಂತು ಸಕಲ ಲೋಕಕ್ಕೆ ಕೌತುಕಮಾಗಿ ಲಿಂಗಮೂರ್ತಿಯಿಂದುದ್ಭವಿಸಲು ಶ್ರೀಮದುದ್ಭವರಾಚಮಲ್ಲೇಶ್ವರನೆಂದು ಹೆಸರನ್ನು ಪಡೆದನಂತೆ. (ಎ.ಇ.XIV, ಪುಟ ೨೭೯) ಇಂದಿಗೂ ಈ ದೇವಾಲಯವು ರಾಚಮಲ್ಲ ದೇವಾಲಯವೆಂದು ಪ್ರಸಿದ್ಧ ಪಡೆದಿದೆ.

### ಜೈನಧರ್ಮ

೧೨ನೆಯ ಶತಮಾನದಲ್ಲಿ ನಿರ್ಮಾಣವಾದ ಏಕೈಕ ಜೈನ ಬಸದಿ ಕುರುಗೋಡು ಗ್ರಾಮದಲ್ಲಿದೆ. ಶೈವಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿದ್ದುದರಿಂದ ಇದರ ಉಲ್ಲೇಖ ಸಮಕಾಲೀನ ಶಾಸನಗಳಲಿಲ್ಲ. ಮುಂದೆ ವಿಜಯನಗರದ ಅರಸರ ಕಾಲದಲ್ಲಿ ಈ ಬಸದಿ ಜೀರ್ಣೋದ್ಧಾರ ಮಾಡಿ ದಾನ ಬಿಟ್ಟ ಮಾಹಿತಿ ಮಾತ್ರ ಲಭ್ಯವಾಗಿವೆ.

### ವೈಷ್ಣವಧರ್ಮ

ದಕ್ಷಿಣಭಾರತಕ್ಕೆ ಕ್ರಿ.ಪೂ.ದಲ್ಲಿಯೇ ಪ್ರವೇಶಸಿದ ವೈಷ್ಣವ ಧರ್ಮ ಕ್ರಿ.ಶ.೪ನೆಯ ಶತಮಾನದ ವೇಳೆಗಾಗಲೇ ಕರ್ನಾಟಕದಲ್ಲಿ ಜನಪ್ರಿಯವಾಗಿದ್ದಿತ್ತು. ಬಲಕುಂದೆ ನಾಡಿನ ಕೆಲವು ಶಾಸನಗಳು ಪ್ರಾರಂಭದಲ್ಲಿ ಶಿವ ಮತ್ತು ವಿಷ್ಣು ಪರವಾದ ಸ್ತೋತ್ರಗಳಿವೆ. ಈ ಅಂಶ ಎರಡು ಧರ್ಮಗಳು ಒಂದನ್ನೊಂದು ಹೊಂದಿಕೊಂಡು ಬೆಳೆಯುತ್ತಿರುವ ಸೂಚನೆಯನ್ನು ನೀಡುತ್ತದೆ. ವೈಷ್ಣವ ಧರ್ಮದ ಬೆಳವಣಿಗೆಯನ್ನು ಭಾಗವತ ಪಂಥ, ಶ್ರೀವೈಷ್ಣವ ಪಂಥ ಹಾಗೂ ದ್ವೈತ ಪಂಥ ಎಂಬ ಮೂರು ಶಾಖೆಗಳನ್ನು ಗುರುತಿಸಲಾಗಿದೆ. ಆದರೆ ನಮ್ಮ ಸೀಮಿತ ಆಕರಗಳ ಅಧ್ಯಯನದ ಪರಿಮಿತಿಯಲ್ಲಿ ಈ ಯಾವ ಅಂಶಗಳೂ ಸ್ಪಷ್ಟವಾಗಿ ಕಾಣುವುದಿಲ್ಲ.

ವೈಷ್ಣವ ಧರ್ಮದ ಬ್ರಾಹ್ಮಣರು ಅಗ್ರಹಾರದ ಮಹಾಜನರೆನಿಸಿ ಅಲ್ಲಿನ ಆಡಳಿತ ನೋಡಿಕೊಳ್ಳುವುದರೊಂದಿಗೆ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನಪ್ರತಿಗ್ರಹ ಎಂಬ ಷಟ್ಕರ್ಮಗಳಲ್ಲಿ ನಿರತರಾಗಿರುತ್ತಿದ್ದರು. ವೇದವಿದರಾದ ಇವರಲ್ಲಿ ಕೆಲವರು "ವೇದಾರ್ಥ ತತ್ಪರ", "ಋಗ್ವೇದ ರತ್ನಾಕರ"ರೆನಿಸಿದ್ದರು. ಬ್ರಾಹ್ಮಣರಲ್ಲಿ ಕೆಲವರು ರಾಜಮನ್ನಣೆಯೊಂದಿಗೆ ರಾಜಗುರು ಪಟ್ಟವನ್ನು ಪಡೆದಿದ್ದರು. ಬಲಕುಂದೆ ನಾಡಿನಲ್ಲಿಯ ಅಗ್ರಹಾರ, ಪಟ್ಟಣ, ತಪೋವನ ಹಾಗೂ ಊರುಗಳಲ್ಲಿರುವ ಬ್ರಹ್ಮಪುರಿಗಳು ಅವರ ಅಧಿಪತ್ಯವನ್ನು ಸೂಚಿಸುತ್ತದೆ. (ಸೌ.ಇ.ಇ.IX-i, ೧೯೮೮, ಪುಟ-೧೬೪)

ಬಲಕುಂದೆ ನಾಡಿನ ಶಾಸನಗಳಲ್ಲಿ ಸುಮಾರು ನಾಲ್ಕು ವೈಷ್ಣವ ದೇವಾಲಯಗಳು ಇರುವುದು ಪ್ರಸ್ತಾಪವಾಗಿದೆ. ಅಂದರೆ ಕೊಳಗಲ್ಲು, ಓರುವಾಯಿ, ಕಲ್ಕಂಬ, ಕುರುಗೋಡು, ಕೋಳೂರು ಮತ್ತು ತೆಕ್ಕಲಕೋಟೆಗಳು ಪ್ರಮುಖ ವೈಷ್ಣವ ಕೇಂದ್ರಗಳಾಗಿದ್ದವು. ಬ್ರಾಹ್ಮಣ ದತ್ತಿಗಳಿಗೆ ಸಂಬಂಧಿಸಿದಂತೆ ಚಲುಕ್ಯರ ಎರಡನೆಯ ಜಯಸಿಂಹನ ರಾಣಿ ದೇಮಳದೇವಿಯು ತನ್ನ ತಾಯಿ ಮಹಾದೇವಿಯ ದೇಹವನ್ನು ಗಂಗೆಯಲ್ಲಿ ಬಿಟ್ಟು ಬಂದ ಮಾಧವ ಸೆಣಂಗಿ, ಕೃಷ್ಣಯ್ಯ ಹಾಗೂ ತುಪ್ಪದ ದೇವಯ್ಯರಿಗೆ ಓರುವಾಯಿ ಗ್ರಾಮವನ್ನು ದತ್ತಿ ಬಿಟ್ಟಿರುವ ಸಂಗತಿ ಈ ನಾಡಿನ ಶಾಸನಗಳಲ್ಲಿ ತುಂಬ ಉಲ್ಲೇಖಿತವಾಗಿದೆ. (ಸೌ.ಇ.ಇ.IX-i, ೧೦೩೬, ಪುಟ-೪೯೨) ಕ್ರಿ.ಶ. ೧೧೪೭ರಲ್ಲಿ ಕೋಳೂರಿನಲ್ಲಿ ರೇವಗಾವುಂಡನ ಭಾವ ವಿಟ್ಟಿಸೆಟ್ಟಿಯು ವಿಷ್ಣು ದೇವಾಲಯವನ್ನು ಕಟ್ಟಿಸಿ ಅದಕ್ಕೆ ದಾನ ಬಿಟ್ಟಿದ್ದಾನೆ. ಅದೇ ರೀತಿಯಾಗಿ ಇದೇ ಗ್ರಾಮದಲ್ಲಿ ಸೂರ್ಯನಾರಾಯಣ ದೇವಾಲಯವನ್ನು ಕಲ್ಯಾಣ ಚಾಲುಕ್ಯರ ಅರಸರ ಕಾಲದಲ್ಲಿ ಜೀರ್ಣೋದ್ಧಾರ ಮಾಡಿದನ್ನು ಶಾಸನದಲ್ಲಿ ದಾಖಲಿಸಲಾಗಿದೆ.

## ಶಾಸನಗಳ ವೈವಿಧ್ಯತೆ

### ೩.೧. ಪೀಠಿಕೆ

ಶಾಸನ ಎಂದರೆ ರಾಜಾಜ್ಞೆ ಎಂದರ್ಥ. (ಪಿ.ಪಿ.ಕೆ. ೧೯೯೩, ಪುಟ-೩೬) ಶಾಸನಶಾಸ್ತ್ರದ ವ್ಯಾಖ್ಯೆ ಶುಕ್ರನೀತಿ ಸಾರದಲ್ಲಿ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ರಾಜಾಜ್ಞೆ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಈ ಅರ್ಥದಲ್ಲೇ ರಾಜ ಪ್ರಶಸ್ತಿ ಶಾಸನಗಳಾಗಿರಬಹುದು. ವೀರಗಲ್ಲುಗಳು, ಮಾಸ್ತಿಗಲ್ಲುಗಳು ಅಥವಾ ಮಹಾಸತಿಗಲ್ಲು, ನಿಷಧಿಗಲ್ಲುಗಳು, ಇವು ಎಲ್ಲವನ್ನು ಶಾಸನ ಎಂದೇ ಪರಿಗಣಿಸಲಾಗಿದೆ.

ಪ್ರಸ್ತುತ ಕುರುಗೋಡು ಪರಿಸರದ ಅಂದರೆ ಕುರುಗೋಡು, ಓರುವಾಯಿ, ಕೋಳೂರು ಮತ್ತು ಮೋಕಾಗಳಲ್ಲಿ ವೀರಗಲ್ಲು ಶಾಸನ, ಮಹಾಸತಿಗಲ್ಲು ಶಾಸನಗಳು, ದಾನಶಾಸನಗಳು, ನಿಸಿದಿಗಲ್ಲು ಶಾಸನಗಳು ಕಂಡುಬಂದಿವೆ. ಈ ಹಿನ್ನೆಲೆಯಲ್ಲಿ ದೂರದ ಶಾಸನಗಳ ವೈವಿಧ್ಯಮಯ ಚಿತ್ರಣವನ್ನು ಇಲ್ಲಿದೆ.

### ೩.೨. ದಾನಶಾಸನಗಳು:

ಧಾರ್ಮಿಕ ದತ್ತಿಯನ್ನು ಉದ್ದೇಶವುಳ್ಳ ಶಾಸನ ದಾನಶಾಸನಗಳು. ಈ ಶಾಸನಗಳ ಧಾರ್ಮಿಕ ದತ್ತಿಯ ಉದ್ದೇಶಿಸುವುದರ ಜೊತೆಗೆ ಖಾಸಗಿ ವ್ಯಕ್ತಿಗಳಿಗೆ ನೀಡಿದ ದಾನಗಳನ್ನು ದಾಖಲು ಮಾಡಿವೆ. ಉದಾ: ದೇವಾಲಯದಲ್ಲಿ ನಡೆಯುವ ವಿದ್ಯಾದಾನಕ್ಕೂ ದೇವಾಲಯದಲ್ಲಿ ಪೂಜೆ ಮಾಡುವ ಪೂಜಾರಿಗಳಿಗೂ ನರ್ತಿಸುವ ನರ್ತಕಿಯರಿಗೂ ವಾದ್ಯಾಗಾರರಿಗೂ ವಿದ್ಯಾದಾನ

ಮಾಡುವ ಅಧ್ಯಾಪಕ ಮತ್ತು ವಿದ್ಯಾರ್ಥಿ ವೃಂದಕ್ಕೂ ಅರವಟ್ಟಿಗೆ, ಕೆರೆಬಾವಿ ಇನ್ನೂ ಮುಂತಾದ ಲೋಕೋಪಯೋಗಿ ಕಾರ್ಯಗಳಿಗೂ ವ್ಯಕ್ತಿಯೊಬ್ಬನ ಸೇವೆ ಪರಾಕ್ರಮಗಳನ್ನು ಮನ್ನಿಸಿಯೇ ನೀಡಿದ ದಾನ ದಾನಶಾಸನವಾಗಿರುತ್ತದೆ. (ಆರ್. ಶೇಷಶಾಸ್ತ್ರಿ, ೨೦೦೫, ಪುಟ-೬) ದಾನವಾಗಿ ನೀಡುವ ಆರ್ಥಿಕ ಮೂಲ ಭೂಮಿಯಾಗಿರಬಹುದು, ನಗದು ರೂಪದ ಹಣವಾಗಿರಬಹುದು. ಅಥವಾ ಅಗತ್ಯ ವಸ್ತುಗಳ ಪೂರೈಕೆ ಇರಬಹುದು.

ಪ್ರಸ್ತುತ ಕುರುಗೋಡು ಪರಿಸರಕ್ಕೆ ಸಂಬಂಧಿಸಿದಂತೆ ಅಂದರೆ ಕುರುಗೋಡು ಪೂರ್ವ ದಿಕ್ಕಿಗೆ ಕಲ್ಲೇಶ್ವರ ದೇವಾಲಯದ ಮುಂದೆ ಒಂದು ಶಾಸನ ಇದೆ. ಅದುವೇ ದಾನಶಾಸನವಾಗಿದೆ. ಅಂದರೆ ಶಕ ೧೧೯೭ನೆಯ ಮನ್ಮಥ, ಪುಷ್ಯ, ಅಮವಾಸ್ಯೆ, ಸೋಮವಾರ, ಸೂರ್ಯಗ್ರಹಣ, ಉತ್ತರಾಯಣ, ಸಂಕ್ರಮಣದಂದು ನೀಡಿದ ದಾನದ ಉಲ್ಲೇಖ ನೀಡುತ್ತದೆ. ಕಲಚೂರಿ ದೊರೆ ಕುಂಡಳೇಶ್ವರ ಚಕ್ರವರ್ತಿ ರಾಯ ಮುರಾರಿ ಸೋವಿದೇವನ ಆಳ್ವಿಕೆಯ ಕಾಲದಲ್ಲಿ ಆತನ ಸಾಮಂತ ಸಿಂದವಂಶದ ಮಹಾಮಂಡಲೇಶ್ವರ ರಾಚಮಲ್ಲನು, ಕುರುಗೋಡನ ಮುಮ್ಮರಿದಂಡರಲ್ಲಿ ಒಬ್ಬನಾದ ಕಲ್ಲಿಶೆಟ್ಟಿ ಸ್ಥಾಪಿಸಿದ ಕಲಿದೇವರಿಗೆ ಭೂಮಿಯನ್ನು ದಾನ ಮಾಡಿದ ಉಲ್ಲೇಖವಿದೆ. **(Sii, ix, Pt.No 266)** ಅದೇ ರೀತಿಯಾಗಿ ಅದೇ ಗ್ರಾಮ ಬಸವೇಶ್ವರ ದೇವಾಲಯದ ದಕ್ಷಿಣದಲ್ಲಿ ಒಂದು ಶಾಸನವೂ ಸಹ ದಾನಶಾಸನವಾಗಿದೆ. ಅದರ ಮಾಹಿತಿ ಈ ಕೆಳಗಿನಂತಿದೆ. ಶಕ ವರ್ಷ ೧೧೯೯ನೆಯ ಹೇಮಳಂಬಿ ಸಂವತ್ಸರದ ಆಷಾಡ ಬಹುಳ ಕೃಷ್ಣಾಂಗಳ ಚತುರ್ದಶಿಯಾಗಿದ್ದು ಇದು ಕ್ರಿ.ಶ.೦೯.೦೯.೧೧೭೭ಕ್ಕೆ ಸರಿಯಾಗುತ್ತದೆ. ಶಾಸನ ಸಿಂದ ವಂಶದ ರಾಚಮಲ್ಲನ ಕಾಲದಾಗಿದ್ದು, ಮಹಾಮಂಡಲೇಶ್ವರನಾದ ಈತನು ಕಲಚೂರಿ ಚಕ್ರವರ್ತಿ ಸಂಖವರ್ಮನ ಸಾಮಂತನಾಗಿದ್ದು ಕುರುಗೋಡಿನ ಮುಮ್ಮಡಿ ದಂಡಗಳು ತ್ರಿಕೂಟಾಲಯವನ್ನು ಕಟ್ಟಿಸಿ ಅಲ್ಲಿ ಗೌರೇಶ್ವರನನ್ನು ಪ್ರತಿಷ್ಠಾಪಿಸಿ ಭೂಮಿ ವಸ್ತುಗಳ ಮೇಲಿನ ಸುಂಕವನ್ನು ದಾನವಾಗಿ ನೀಡುತ್ತಾರೆ. ಅಲ್ಲದೇ ಮಲ್ಲಿಕಾರ್ಜುನ ದೇವಾಲಯವನ್ನು ನಿರ್ಮಿಸಿ ಅದರ ನಿರ್ವಹಣೆಗೆ ಭೂಮಿಯನ್ನು ದಾನ ಮಾಡಿದ್ದನ್ನು ದಾಖಲಿಸಿದೆ. **(sii, ix, Pt. No 267)**

ಉಂಡುಲಿ ಸಂಗಮೇಶ್ವರ ಗುಡಿಯ ಮುಂದಿನ ಮಂಟಪದಲ್ಲಿನ ಶಾಸನ ಸಹ ದಾನ ಶಾಸನವಾಗಿದೆ. ಪ್ರಸ್ತುತ ಈ ತೃಟಿತ ಶಾಸನ ಶಾಲಿವಾಹನ ಶಕ ವರ್ಷ ೧೪೬೬ನೆಯ ಶುಭಕೃತ್, ದ್ವಿತೀಯ ಶ್ರಾವಣ ಶು. ೧೦ರ ಶಾಸನವು ಸದಾಶಿವರಾಯರ ಆಳ್ವಿಕೆಯ ಕಾಲವಾಗಿದೆ. ಮೊದಲು ಚೆನಾಕುಂಟೆ ಗ್ರಾಮವನ್ನು ದಾನವಾಗಿ ನೀಡಿದನು. **(sii, ix, Pt. No 606)** ಕುರುಗೋಡಿನ ಹಾಲುಗೋಡೆಯ ಪಾಳು ದೇವಾಲಯದ ದಕ್ಷಿಣದ ಗೋಡೆಯಲ್ಲಿ ಒಂದು ಶಾಸನವಿದೆ. ಅದು ಸಹ ದಾನ ಶಾಸನವಾಗಿದೆ. ಈ ಶಾಸನವು ಶಕ. ೧೪೬೭ ವಿಶ್ವಾವಸು

ಪುಷ್ಯ, ಬ.೧೦ ಶಾಸನವು ಸದಾಶಿವರಾಯ ಮಹಾರಾಯರ ಕಾಲದ್ದಾಗಿದೆ. ಮಹಾಮಂಡಲೇಶ್ವರ ಕೂಟಗಾರ ರಾಜರಾಜ ಒಡೆಯರ ಮೊಮ್ಮಕ್ಕಳು ಅಳಿಯ ಲಿಂಗರಾಜ ದೇವನ ಅಣ್ಣನಾದ ರಾಮರಾಜಯ್ಯನು ತನ್ನ ತಂದೆ ಮಲ್ಲರಾಜ ಒಡೆಯರಿಗೆ ಪುಣ್ಯವಾಗಲಿ ಎಂದು ಕುರುಗೋಡು ಜಿನದೇವರ ಅಮೃತ ಪಡಿನೈವೇದ್ಯಕ್ಕೆ ಭೂಮಿಯನ್ನು ದಾನವಾಗಿ ಮಾಡಲಾಗಿದೆ. **(Sii, ix, Pt. No 618)**

**ಕುರುಗೋಡು ಪರಿಸರದ ದಾನ ಶಾಸನಗಳ ಸಾರಾಂಶ:**

| | |
|---|---|
| ಶಾಸನದ ಸಂಖ್ಯೆ | : ೧ |
| ಗ್ರಾಮ | : ಕುರುಗೋಡು |
| ಸ್ಥಳ | : ಕಲ್ಲೇಶ್ವರ ದೇವಾಲಯದ ಮುಂದೆ |
| ಲಿಪಿ ಮತ್ತು ಭಾಷೆ | : ಕನ್ನಡ |
| ವರದಿ/ಪ್ರಕಟಣೆ | : AR No.58 of 1904, sii, ix, Pt.No 296 |
| ಕಾಲ | : ೧೧೭೬ |

ಶಕವರ್ಷ ೧೮೯೭ನೆಯ ಮನ್ಮಥ ಪುಷ್ಯ, ಅಮವಾಸ್ಯೆ, ಸೋಮವಾರ, ಸೂರ್ಯಗ್ರಹಣ, ಉತ್ತರಾಯಣ ಸಂಕ್ರಮಣದ ಉಲ್ಲೇಖವಿರುವ ಈ ಶಾಸನದ ತೇದಿ ಸರಿ ಇಲ್ಲ. ಕ್ರಿ.ಶ. ೧೩.೦೧.೧೧೭೬ಕ್ಕೆ ಸರಿಹೊಂದುತ್ತೆಯಾದರೂ ಪುಷ್ಯ ಅಮವಾಸ್ಯೆಯಂದು ಸೂರ್ಯಗ್ರಹಣ ಇರುವುದಿಲ್ಲ. ಹಾಗೂ ಉತ್ತರಾಯಣ ಸಂಕ್ರಮಣ ಆಗಿರುವುದಿಲ್ಲ. ಕಲಚೂರಿ ದೊರೆ ಕುಂತಳೇಶದ ಚಕ್ರವರ್ತಿ ರಾಯ ಮುರಾರಿ ಸೋವಿದೇವನ ಆಳ್ವಿಕೆಯ ಕಾಲದಲ್ಲಿ ಕುರುಗೋಡಿನ ಮುಮ್ಮರಿಂಡರಲ್ಲಿ ಒಬ್ಬನಾದ ಕಲ್ಲಿಶೆಟ್ಟಿ ಸ್ಥಾಪಿಸಿದ ಕಲಿದೇವರಿಗೆ ಭೂಮಿಯನ್ನು ದಾನಮಾಡಿದನು. ಬಳ್ಳಾರಿಯ ಮಹಾಮಂಡಲೇಶ್ವರ ಅಜ್ಜರಸನು ಅರವಟ್ಟಿಗೆಗೆ ಭೂಮಿಯನ್ನು ಮುಮ್ಮರಿದಂಡರು ನಖರರು, ವ್ಯಾಪಾರದ ಮೇಲೆ ಸುಂಕವನ್ನು ಮತ್ತು ಆದಾಯವನ್ನು ದಾನ ಮಾಡಲೆಂದು ಮುಮ್ಮರಿದಂಡರ ಕಾರ್ಯವನ್ನು ಈ ಶಾಸನದಲ್ಲಿ ವರ್ಣಿಸಿದೆ.

| | |
|---|---|
| ಶಾಸನದ ಸಂಖ್ಯೆ | : ೨ |
| ಗ್ರಾಮ | : ಕುರುಗೋಡು |
| ಸ್ಥಳ | : ಬಸವೇಶ್ವರ ದೇವಾಲಯ ದಕ್ಷಿಣ |
| ಲಿಪಿ ಮತ್ತು ಭಾಷೆ | : ಕನ್ನಡ |
| ವರದಿ/ಪ್ರಕಟಣೆ | : AR No.56 of 1904, siiix, Pt. No 297 |
| ಕಾಲ | : ೧೧೭೭ |

ಶಕವರ್ಷ ೧೦೯೯ನೆಯ ಹೇಮಳಂಬಿ ಸಂವತ್ಸರದ ಆಷಾಢ ಬಹುಳ ಚತುರ್ದಶಿಯಾಗಿದ್ದು ಇದು ಕ್ರಿ.ಶ. ೦೬.೦೬.೧೧೭೭ರ ಭಾನುವಾರಕ್ಕೆ ಸರಿಹೊಂದುತ್ತದೆ. ಈ ಶಾಸನ ಸಿಂದವಂಶದ ರಾಚಮಲ್ಲನ ಕಾಲದ್ದಾಗಿದ್ದು ಮಹಾಮಂಡಲೇಶ್ವರನಾದ ಈತನು ಕಲಚೂರಿ ಚಕ್ರವರ್ತಿ ಸಂಖವರ್ಮನ ಸಾಮಂತನಾಗಿದ್ದು, ಕುರುಗೋಡಿನ ಮುಮ್ಮರಿದಂಡರು ತ್ರಿಕೂಟಾಲಯವನ್ನು ಕಟ್ಟಿಸಿ ಅಲ್ಲಿ ಗೌರೇಶ್ವರನನ್ನು ಪ್ರತಿಷ್ಠಾಪಿಸಿ ಭೂಮಿಯನ್ನು ಮತ್ತು ಗ್ರಾಮದಲ್ಲಿ ಮಾರಾಟವಾಗಿರುವ ಮತ್ತು ಕೊಳ್ಳುವ ವಸ್ತುಗಳ ಮೇಲಿನ ಸುಂಕವನ್ನು ದಾನವಾಗಿ ನೀಡುತ್ತಾರೆ. ಅಲ್ಲದೇ ಮಲ್ಲಿಶೆಟ್ಟಿ ವಂಶಾವಳಿಯನ್ನು ನೀಡಿದ್ದು ಅವನು ಮಲ್ಲಿಕಾರ್ಜುನ ದೇವರನ್ನು ಪ್ರತಿಷ್ಠಾಪಿಸಿ ಅದರ ನಿರ್ವಹಣೆಗೆ ದಾನವನ್ನು ಕೊಟ್ಟಿದ್ದಾನೆ. ಮುದ್ದರಸನು ಮುದ್ದೇಶ್ವರ ದೇವರನ್ನು ಪ್ರತಿಷ್ಠಾಪಿಸಿ ದೇವರ ಪೂಜಾ ಕಾರ್ಯಗಳಿಗಾಗಿ ಭೂಮಿಯನ್ನು ದಾನವಾಗಿ ಕೊಟ್ಟನು. ಮುದ್ದುರಸನ ವಂಶಾವಳಿಯನ್ನು ಈ ಶಾಸನವು ಸೂಚಿಸುವುದು ಈ ಶಾಸನದ ವಿಶೇಷತೆಯಾಗಿದೆ. ಕೌಂಡಿನ್ಯ ಗೋತ್ರದ ಮಾರ್ತಂಡದೇವ ಅವನ ಮಕ್ಕಳು ಸೋವಿದೇವ ರಾಚದೇವ, ಕಾಳಿದಾಸ ಹಾಗೂ ಮುದ್ದುರಸ ಬಣಜಿಗರಾದ ಮುಮ್ಮರಿದಂಡರನ್ನು ಧೈರ್ಯವಂತರು, ಶರಣಗತರನ್ನು ರಕ್ಷಿಸುವವರು, ದುಷ್ಟರಿಗೆ ರುದ್ರರು, ಒಳ್ಳೆಯವರಿಗೆ ಒಳ್ಳೆಯವರು, ಹಾಗೂ ವೈರಿಗಳಿಗೆ ಸಿಂಹಸ್ವಪ್ನದಂತೆ ಇರುವರು ಎಂದು ಈ ಶಾಸನ ವರ್ಣಿಸುತ್ತದೆ.

| | |
|---|---|
| ಶಾಸನದ ಸಂಖ್ಯೆ | : ೩ |
| ಗ್ರಾಮ | : ಕುರುಗೋಡು |
| ಸ್ಥಳ | : ದೊಡ್ಡಬಸಪ್ಪನ ಗುಡಿಯ ಕಂಬದ ಮೇಲೆ |
| ಲಿಪಿ ಮತ್ತು ಭಾಷೆ | : ಕನ್ನಡ |
| ವರದಿ/ಪ್ರಕಟಣೆ | : AR No.56 of 1904 |
| ಕಾಲ | : ೧೫೧೨ |

ಶಾಲಿವಾಹನ ಶಕ ೧೪೩೫ನೆಯ ಅಂಗೀರಸ ಆಶ್ವೀಜ ಶು.೧೪ ಆಗಿದ್ದು, ಶಾಲಿವಾಹನ ಶಕವರ್ಷ ೧೪೩೫ ಅಂಗೀರಸ ಸಂವತ್ಸರವು ಬಂದಿದೆ. ಹೀಗಾಗಿ ಇದು ಗತವರ್ಷವಾಗಿದ್ದು, ಕ್ರಿ.ಶ. ೨೪.೦೯.೧೫೧೨ಕ್ಕೆ ಸರಿಹೊಂದುತ್ತದೆ. ಕುರುಗೋಡಿನ ಮಲ್ಲಪ್ಪ ನಾಯಕರ ಪತ್ನಿಯಾದ ಬಲಕುಂದೆಯ ಮಲ್ಲಮ್ಮನು ಹೂಜೆಹಾಳ ಶಾಂತಮಲ್ಲಿಕಾರ್ಜುನ ದೇವರ ದೇವಾಲಯದ ಭೂಮಿಯನ್ನು ಜೀರ್ಣೋದ್ಧಾರ ಮಾಡಿ ಅದಕ್ಕೆ ತೋಟವನ್ನು ದಾನವಾಗಿ ಬಿಟ್ಟಿದ್ದಾಳೆ.

ಸದಾಶಿವ ಮಹಾರಾಯ ಕಾಲದ ಈ ಶಾಸನವು ಶಕ ೧೪೭೭, ವಿಶ್ವವಸು, ಪುಷ್ಯ, ಬ, ೧೦ ಸೋಮವಾರ, ಅಂದರೆ ಕ್ರಿ.ಶ. ೨೮.೧೨.೧೫೫೫ರ ಸೋಮವಾರಕ್ಕೆ ಸರಿಹೊಂದುತ್ತದೆ.

ಮಹಾಮಂಡಲೇಶ್ವರ ಕೊಟಗಾರ ರಾಮರಾಜ ಒಡೆಯರ ಮೊಮ್ಮಕ್ಕಳು, ಅಳಿಯ ಲಿಂಗರಾಜದೇವನ ಅಣ್ಣನಾದ ರಾಮರಾಜಯ್ಯನು ತನ್ನ ತಂದೆ ಮಲ್ಲಿರಾಜ ಒಡೆಯರಿಗೆ ಪುಣ್ಯವಾಗಲೆಂದು ಕುರುಗೋಡು ಜೀನ ದೇವರ ಅಮೃತ ಪಡಿನೈವೇದ್ಯಕ್ಕೆ ಭೂಮಿಯನ್ನು ದಾನ ಕೊಟ್ಟು ಈ ದಾನವನ್ನು ಗೌಡ, ಸೇನಬೋವ ಹಾಗೂ ಪಟ್ಟಣ ಸ್ವಾಮಿಯವರೂ ಸೇರಿಸಿಕೂಡಲಾಗಿದೆ ಪಾಲ್ಗುಣ, ಶು.೮, ಸೋಮವಾರ ಸರಿಹೊಂದುವ ಕ್ರಿ.ಶ. ೦೪.೦೨.೧೫೪೬ರ ಸೋಮವಾರದ ಮತ್ತೊಂದು ಶಾಸನದಲ್ಲಿ ಮೂಲಸಂಘ ಬಲತ್ಕಾರ ಗಣಕ್ಕೆ ಸೇರಿದ ಸೂರಿಯಪ್ಪ ಶೆಟ್ಟಿಯ ಮಗ ಗೋಮಿಶೆಟ್ಟಿ ಹಾಗೂ ಪದ್ಮರಸ ಪಂಡಿತರು ಸೇರಿ ದಾನ ಮಾಡಿದ್ದನ್ನು ಶಾಸನ ಉಲ್ಲೇಖಿಸುತ್ತದೆ.

| | |
|---|---|
| ಶಾಸನದ ಸಂಖ್ಯೆ | : ೬ |
| ಗ್ರಾಮ | : ಕುರುಗೋಡು |
| ಸ್ಥಳ | : ಸಂಗಮೇಶ್ವರ ಗುಡಿಯ ಮುಂದೆ |
| ಲಿಪಿ ಮತ್ತು ಭಾಷೆ | : ಕನ್ನಡ |
| ವರದಿ/ಪ್ರಕಟಣೆ | : AR No.56 of 1904, siiix, Pt. No 606 |
| ಕಾಲ | : ೧೫೪೩ |

ತೃಟಿತ ಶಾಲಿವಾಹನ ಶಕ ೧೪೬೬ನೆಯ ಶುಭಕೃತನ ದ್ವಿತೀಯ ಶ್ರಾವಣ ಶು. ೧೦ರ ಶಾಸನವು ೦೯.೦೮.೧೫೪೩ರ ಗುರುವಾರಕ್ಕೆ ಸರಿಹೊಂದುತ್ತದೆ. ಸದಾಶಿವ ಮಹಾರಾಯರ ಆಳ್ವಿಕೆಯ ಕಾಲವಾಗಿದೆ. ಮೊದಲು ಕೃಷ್ಣರಾಯ ಮಹಾರಾಯನು ಕುರುಗೋಡು ಸಂಗಮೇಶ್ವರ ದೇವರಿಗೆ ಚೆನಾಕುಂಟೆ ಗ್ರಾಮವನ್ನು ದಾನವಾಗಿ ಕೊಟ್ಟಿದ್ದು, ಇದು ಹಾಳಾಗಿದ್ದನ್ನು ಗುಂಡಯ್ಯ ಮಹಾರಾಯನ ಅಳಿಯನಾದ ಲಿಂಗರಾಜನು ಸದಾಶಿವ ಮಹಾರಾಯರಿಗೆ ಪುಣ್ಯವಾಗಬೇಕೆಂದು ಪುನರ್ ದತ್ತಿಯಾಗಿ ಬಿಟ್ಟಿದ್ದಲ್ಲದೆ ಗ್ರಾಮದ ತೋಟವನ್ನು ಮಾನ್ಯ ಮಾಡಿದ್ದನ್ನು ಶಾಸನ ದಾಖಲಿಸಿದೆ.

| | |
|---|---|
| ಶಾಸನದ ಸಂಖ್ಯೆ | : ೭ |
| ಗ್ರಾಮ | : ಓರುವಾಯಿ |
| ಸ್ಥಳ | : ಬೆನಕಪ್ಪ ದೇವಾಲಯದ ಪ್ರವೇಶದ್ವಾರದ ಎಡಭಾಗದಲ್ಲಿ |
| ಲಿಪಿ ಮತ್ತು ಭಾಷೆ | : ಕನ್ನಡ |
| ವರದಿ/ಪ್ರಕಟಣೆ | : AR No.56 of 1904, sii, ix, Pt. No 253 |
| ಕಾಲ | : ೧೧೪೯ |

ಈ ಶಾಸನವು ಸ್ವಲ್ಪ ತೃಟಿತವಾಗಿದ್ದು, ಶಕ ೧೦೭೧ನೆಯ ವಿಭವ, ಪಾಲ್ಗುಣ, ಶು.೧೦ ಸೋಮವಾರ ಉತ್ತರಾಯಣ ಸಂಕ್ರಾಂತಿಯು ಕ್ರಿಶ. ೨೨.೧೨.೧೧೪೯ರ ಬುಧವಾರವಾಗುತ್ತದೆ. ಉತ್ತರಾಯಣವು ಡಿಸೆಂಬರ್ ೩೨೫ರ ಶನಿವಾರದಂದು ಬರುತ್ತದೆ. ಚಲುಕ್ಯ ಚಕ್ರವರ್ತಿ ಜಗದೇಕಮಲ್ಲದೇವ (೨)ನ ಆಳ್ವಿಕೆಯ ಕಾಲವಾಗಿದ್ದು, ಅವನ ಮಹಾಮಂಡಲೇಶ್ವರ ಕಾಚರಸ, ಗಂಗರಸ, ದೊರವದಿನಾಡ ಲೋಕರಸ ಹಾಗೂ ಮಹಾಪ್ರಧಾನ ಲಖ್ಖೆಯನಾಯಕ, ಅವನ ತಮ್ಮಂದಿರಾದ ಮಾದೆನಾಯಕ, ವಿರುಪಯನಾಯಕ ಮತ್ತು ಆಚೆಯನಾಯಕ ಹಾಗೂ ದೊರವದಿ ಎಪ್ಪತ್ತರ ಪ್ರಭುಗಾವುಂಡರು, ಎಂಟು ಹಿಟ್ಟು ಎಲ್ಲರೂ ಸೇರಿ ಕುತನೂರಿನಲ್ಲಿ ವಿರೂಪಾಕ್ಷ ದೇವರನ್ನು ಮತ್ತು ಕುರುಗೋಡುನ ಬೋಗೇಶ್ವರ ದೇವಾಲಯಗಳನ್ನು ಕಟ್ಟಿಸಿ ಭೂದಾನ ನೀಡಿದರು. ಓರುವಾಯ ಕಲಿದೇವರ ಸ್ಥಾನಪತಿ ಮತ್ತು ಭೀಮರಾಸಿ ಪಂಡಿತರ ಕಾಲನ್ನು ತೊಳೆದು ಈ ದಾನವನ್ನು ಕೂಡಲಾಯಿತು. ಭೀಮರಾಸಿ ಪಂಡಿತನು ಹೂಸುಕುತ್ತಕನೂರಿನಲ್ಲಿ ಬ್ರಹ್ಮೇಶ್ವರ ದೇವರನ್ನು ಮತ್ತು ನೀಲಕಂಠ ದೇವರನ್ನು ಪ್ರತಿಷ್ಠಾಪಿಸಿ ಭೂದಾನ ನೀಡಿದ್ದಾನೆ.

| | | |
|---|---|---|
| ಶಾಸನದ ಸಂಖ್ಯೆ | : | ೮ |
| ಗ್ರಾಮ | : | ಓರುವಾಯಿ |
| ಸ್ಥಳ | : | ಬೆನಕಪ್ಪ ದೇವಾಲಯದ ಪ್ರವೇಶದ್ವಾರದ ಬಲಭಾಗ |
| ಲಿಪಿ ಮತ್ತು ಭಾಷೆ | : | ಕನ್ನಡ |
| ವರದಿ/ಪ್ರಕಟಣೆ | : | AR No.68 of 1904, sii, ix, Pt. No 322 |
| ಕಾಲ | : | ೧೧೯೫ |

ವಿಕ್ರಮ ಕಾಲದ ಆನಂದ ಸಂವತ್ಸರದ ಪಾಲ್ಗುಣ ಮಾಸದ ಶು.೧೫, ಆದಿವಾರ ಕ್ರಿಶ. ೨೬.೦೨.೧೧೯೫ ಭಾನುವಾರಕ್ಕೆ ಸರಿಹೊಂದುತ್ತದೆ. ಏಚಿಸೆಟ್ಟಿ ಎಂಬುವನು ಇವಿನಾಯಕ ದೇವರಿಗೆ ದೇವಾಲಯವನ್ನು ಕಟ್ಟಿಸಿದಾಗ, ಸಿಂಧವಂಶದ ರಾಚಮಲ್ಲನ ಮೊಮ್ಮಗನೂ, ಇರುಂಗಳೋ ದೇವನ ಮಗನು ಆದ ಇಮ್ಮಡಿ ರಾಚಮಲ್ಲದೇವನು ಈ ದೇವಾಲಯಕ್ಕೆ ಭೂಮಿಯನ್ನು ದಾನವಾಗಿ ನೀಡಿದನು.

| | | |
|---|---|---|
| ಶಾಸನದ ಸಂಖ್ಯೆ | : | ೯ |
| ಗ್ರಾಮ | : | ಓರುವಾಯಿ |
| ಸ್ಥಳ | : | ಬೆನಕಪ್ಪ ದೇವಾಲಯ |
| ಲಿಪಿ ಮತ್ತು ಭಾಷೆ | : | ಕನ್ನಡ |
| ವರದಿ/ಪ್ರಕಟಣೆ | : | AR No.68 of 1904, sii, ix, Pt. No 334 |
| ಕಾಲ | : | ೧೨೧೭ |

ಈಶ್ವರ ಶ್ರಾವಣ, ಬಹುಳ ಅಮವಾಸ್ಯೆ, ಶುಕ್ರವಾರ ಸೂರ್ಯಗ್ರಹಣದಂದು ಅಂದರೆ ಕ್ರಿ.ಶ. ೦೪.೦೮.೧೨೧೭, ಶುಕ್ರವಾರದ ಈ ಶಾಸನವು ಹೊಯ್ಸಳದೊರೆ ವೀರಬಲ್ಲಾಳ (೨)ನ ಆಳ್ವಿಕೆಯ ಕಾಲವಾಗಿದೆ. ವೀರ ಬಲ್ಲಾಳನ ರಾಜ್ಯ ಸಮುದ್ಧರಣನೆಂದು, ರಣದವಳೆಂದು ಖ್ಯಾತನಾದ ಬಸವಣ್ಣ ದಂಡನಾಯಕನು, ವಿನಾಯಕ ದೇವರಿಗೆ ಭೂಮಿಯನ್ನು ದಾನ ಮಾಡಿದ ಏಚಿಶೆಟ್ಟಿಯು ವಿನಾಯಕ ಸ್ಥಾನವನ್ನು ಭೀಮರಾಶಿ ಗುರುವಿನ ಶಿಷ್ಯನಾದ ಚೀಲರಾಶಿಗೆ ದಾರಪೂರ್ವಕವಾಗಿ ದಾನ ಕೊಟ್ಟಿದ್ದನ್ನು ಶಾಸನ ನಿರೂಪಿಸುತ್ತದೆ.

| | |
|---|---|
| ಶಾಸನದ ಸಂಖ್ಯೆ | : ೧೦ |
| ಗ್ರಾಮ | : ಓರುವಾಯಿ |
| ಸ್ಥಳ | : ರಾಮಲಿಂಗೇಶ್ವರ ದೇವಾಲಯ |
| ಲಿಪಿ ಮತ್ತು ಭಾಷೆ | : ಕನ್ನಡ |
| ವರದಿ/ಪ್ರಕಟಣೆ | : AR No.201 of 1913, sii, ix, Pt. No 91 |
| ಕಾಲ | : ೧೦೩೬ |

ತ್ರುಟಿತ ಶಕ ೯೫೮ನೆಯ ದಾತು, ಉತ್ತಾರಾಯಣ ಸಂಕ್ರಾಂತಿಯು ಕ್ರಿ.ಶ. ೨೪.೧೨.೧೦೩೬ರ ಶುಕ್ರವಾರಕ್ಕೆ ಸರಿಹೊಂದುತ್ತದೆ. ಚಲುಕ್ಯ ದೊರೆ ಜಗದೇಕ ಮಲ್ಲದೇವರ (ಇಮ್ಮಡಿ ಜಯಸಿಂಹ) ಆಳ್ವಿಕೆಯ ಕಾಲದ್ದಾಗಿದ್ದು ನೊಳಂಬಾದೇವಿಯ ಅಂಗವನ್ನು (ಬಸ್ಮ) ಗಂಗೆಯಲ್ಲಿ ಹಾಕಿ ಬಂದ ಮಾದವಷಡಂಗಿ, ಕ್ರಿಷ್ಣಯ್ಯನಿಗೆ ಭೂದಾನ ಕೊಡಲಾದ ವಿಷಯವನ್ನು ಶಾಸನ ತಿಳಿಸುತ್ತದೆ. ಜಗದೇಕಮಲ್ಲದೇವನ ಮಹಿಷಿ ನೊಳಂಬ ಪುತ್ರಿದೇವಳದೇವಿ ಹಾಗೂ ನೊಳಂಬ ಉದಯಾದಿತ್ಯನ ಉಲ್ಲೇಖವಿದೆ.

| | |
|---|---|
| ಶಾಸನದ ಸಂಖ್ಯೆ | : ೧೧ |
| ಗ್ರಾಮ | : ಓರುವಾಯಿ |
| ಸ್ಥಳ | : ರಾಮಲಿಂಗೇಶ್ವರ ದೇವಾಲಯದ ತುಂಡುಶಾಸನ |
| ಲಿಪಿ ಮತ್ತು ಭಾಷೆ | : ಕನ್ನಡ |
| ವರದಿ/ಪ್ರಕಟಣೆ | : AR No.200 of 1913, sii, ix, Pt. No 92 |
| ಕಾಲ | : ೧೦೩೬ |

ಸ್ವಲ್ಪವೇ ತ್ರುಟಿತವಾಗಿದ್ದು, ಮೇಲಿನ ಶಾಸನದ ತೇದಿಯೇ ಇದಾಗಿದೆ. ಅಂದರೆ ಕ್ರಿ.ಶ. ೨೪.೧೨.೧೦೩೬ ಚಲುಕ್ಯ ದೊರೆ ಜಗದೇಕಮಲ್ಲದೇವನ ಆಳ್ವಿಕೆಯಾದ್ದಾಗಿದೆ. ಅವನ ಮಹಿಷಿ ದೇವಳ ದೇವಿ ಹಾಗೂ ಮಹಾಮಂಡಲೇಶ್ವರ, ಕಾಂಚಿಪುರ ಹಾಗೂ ತುಪ್ಪದ ದೇವಯ್ಯನಿಗೆ,

ನೊಳಂಬಾದೇವಿಯ ಚಿತಾಭಸ್ಮವನ್ನು ಗಂಗೆಯಲ್ಲಿ ವಿಸರ್ಜಿಸಿದ್ದಕ್ಕಾಗಿ ಭೂಮಿಯನ್ನು ದಾನ ಮಾಡಿದರು.

ಶಾಸನದ ಸಂಖ್ಯೆ : ೧೨
ಗ್ರಾಮ : ಮೋಕಾ
ಸ್ಥಳ : ಮಲ್ಲೇಶ್ವರ ದೇವಾಲಯ
ಲಿಪಿ ಮತ್ತು ಭಾಷೆ : ಕನ್ನಡ
ವರದಿ/ಪ್ರಕಟಣೆ : AR No.227 of 1913, siiix, Pt. No 481
ಕಾಲ : ೧೫೧೦

ತೃಟಿತ ಶಾಲಿವಾಹನ ಶಕವರ್ಷ ೧೪೩೧ನೆಯ ಶುಕ್ಲ, ಮಾಘ, ಬ.೧೪ ಶಿವರಾತ್ರಿಯ ಉಲ್ಲೇಖವಿದೆ. ಇದು ಕ್ರಿ.ಶ. ೦೭.೦೨.೧೫೧೦ ಗುರುವಾರಕ್ಕೆ ಸರಿಹೊಂದುತ್ತದೆ. ಈ ಶಾಸನವು ಕೃಷ್ಣದೇವರಾಯನಿಗೆ ಕ್ಷೇಮವಾಗಬೇಕೆಂದು ಮಲುಕಣ ಗ್ರಾಮವನ್ನು ದಾನಮಾಸಿದ್ದನ್ನು ಉಲ್ಲೇಖಿಸಿದೆ.

ಶಾಸನದ ಸಂಖ್ಯೆ : ೧೩
ಗ್ರಾಮ : ಕೋಳೂರು
ಸ್ಥಳ : ಸೂರ್ಯನಾರಾಯಣ ದೇವಾಲಯ
ಲಿಪಿ ಮತ್ತು ಭಾಷೆ : ಕನ್ನಡ
ವರದಿ/ಪ್ರಕಟಣೆ : ARNo.211 of 1913, siiix, Pt. No 249
ಕಾಲ : ೧೧೪೭

ಚಲುಕ್ಯ ಜಗದೇಕಮಲ್ಲದೇವನ ೧೦ನೆಯ ವರ್ಷದ ಪ್ರಭವ, ಪುಷ್ಯ, ಶು.೨, ಬೃಹಸ್ಪತಿ ವಾರದಂದು. ಇದು ಕ್ರಿ.ಶ. ೨೫.೧೨.೧೧೪೭ರ ಗುರುವಾರಕ್ಕೆ ಸರಿಹೊಂದುತ್ತದೆ. ಈ ಶಾಸನದಲ್ಲಿ ದೀರ್ಘವಾಗಿ ವರ್ಣಿತನಾದ ಫಣಿವಂಶದ ರೇವಗಾವುಂಡನು ಸೋಮೇಶ್ವರ, ಕಾಲೇಶ್ವರ, ಮಲ್ಲಿಕಾರ್ಜುನ, ಆದಿತ್ಯ, ವಿಘ್ನೇಶ್ವರ, ಭೈರವ ಹಾಗೂ ಮೇಳೇಶ್ವರ ದೇವಾಲಯಗಳನ್ನು ಕಟ್ಟಿಸಿದನು. ಆತನ ಭಾವ ವಿಟ್ಟಿಸೆಟ್ಟಿಯ ಜೊತೆಗೂಡಿ ವಿಷ್ಣು ದೇವಾಲಯ ನಿರ್ಮಿಸಿದನು. ಗ್ರಾಮದ ಹೊರ ಭಾಗದಲ್ಲಿ ಭಾವಿ, ಶಿವಗೃಹ ಹಾಗೂ ಕೆರೆಯನ್ನು ನಿರ್ಮಿಸಿದನು. ಈ ಕಾರ್ಯಗಳಿಗಾಗಿ ಆತನು ತನ್ನ ಆಸ್ತಿಯನ್ನು ಮಾರಿ ಬಂದ ಹಣವನ್ನು ವ್ಯಯಿಸಿದನು. ಇಮ್ಮಡಿ ಭೀಮರಸನು ದೇವಾಲಯಗಳ ಸೇವೆಗಾಗಿ ಭೂಮಿಯನ್ನು ದಾನ ಮಾಡಿದನು. ಈ ಶಾಸನವು ನಂದರನ್ನು ಮತ್ತು ಮೌರ್ಯರನ್ನು ಉಲ್ಲೇಖಿಸುತ್ತದೆ.

## ೩.೩. ವೀರಗಲ್ಲು ಶಾಸನ:

ವೀರಗಲ್ಲು ಎಂಬುದು ವೀರರ ನೆನಪಿಗೆ ನಿಲ್ಲಿಸಿದ ಶಾಸನ. ಕರ್ನಾಟಕದಲ್ಲಿ ವೀರಗಲ್ಲುಗಳ ಸಂಖ್ಯೆಯೆ ಅಧಿಕವಾಗಿದೆ. ಇವುಗಳ ಶಿಲ್ಪವನ್ನು ಶಾಸನಸಹಿತ ಶಿಲ್ಪ ಮತ್ತು ಶಾಸನರಹಿತ ಶಿಲ್ಪವೆಂದು ಎರಡು ಬಾಗ ಮಾಡಬಹುದು. ಶಾಸನವಿರಲಿ ಇಲ್ಲದಿರಲಿ ಆ ವೀರಗಲ್ಲಿನ ಉದ್ದೇಶ ಒಂದೇ ಆಗಿರುವುದರಿಂದ ವೀರಗಲ್ಲು ಶಾಸನ ಎಂದೇ ಪರಿಗಣಿಸಲಾಗುವುದು. ಈ ವೀರಗಲ್ಲುಗಳ ವಿಷಯ ಮತ್ತು ಅವುಗಳ ಮೇಲಿರುವ ಶಿಲ್ಪದ ಆಧಾರದಿಂದ ಹಲವು ವಿಧವಾಗಿ ವಿಂಗಡಿಸಿ ಅಧ್ಯಯನ ಮಾಡಬಹುದು. ವ್ಯಕ್ತಿ-ವ್ಯಕ್ತಿಗಳ ಹೋರಾಟಶಿಲ್ಪ, ಪ್ರಾಣಿ ಪ್ರಾಣಿಗಳ ಹೋರಾಟಶಿಲ್ಪದ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ.

### ವ್ಯಕ್ತಿ-ವ್ಯಕ್ತಿಗಳ ಹೋರಾಟ ಶಿಲ್ಪ

ವ್ಯಕ್ತಿ-ವ್ಯಕ್ತಿಯೊಡನೆ ಹೋರಾಡುತ್ತಿರುವ ಶಿಲ್ಪ ಎಂದರೆ ತನ್ನ ಪ್ರಾಣ ರಕ್ಷಣೆಗಾಗಿಯೋ ಅಥವಾ ಆಸ್ತಿ, ಸ್ತ್ರೀ, ದನಕರುಗಳ ರಕ್ಷಣೆಗಾಗಿಯೋ, ಶತ್ರುಗಳ ಜೊತೆ ಹೋರಾಡುತ್ತಿರುವುದನ್ನು ಸೂಚಿಸುವ ಶಿಲ್ಪಗಳು. ಇವನ್ನು ನಾವು ಅಧ್ಯಯನದ ದೃಷ್ಟಿಯಿಂದ ತುರುಗೋಳ್ ಶಿಲ್ಪ, ಪೆಣ್ಬುಯಲ್ ಶಿಲ್ಪ, ಊರಳಿವು ಶಿಲ್ಪ, ಗಡಿಕಾಳಗ ಶಿಲ್ಪ ಮತ್ತು ಕಳ್ಳರೊಡನೆ ಹೋರಾಟದ ಶಿಲ್ಪ ಎಂದು ಐದು ವಿಧವಾಗಿ ವಿಂಗಡಿಸಬಹುದು. (ಪರಮಶಿವಮೂರ್ತಿ.ಡಿ.ವಿ, ೧೯೯೯, ೭೭)

**ತುರುಗೋಳ್**: ರನ್ನ ಕವಿಯು ತನ್ನ ಗದಾಯುದ್ಧ ಕೃತಿಯಲ್ಲಿ ಈ ಕೆಳಗಿನಂತೆ ಹೇಳುತ್ತಾನೆ.

ತುಱುಗೋಳೊಳ್ ಪೆಣ್ಬುಯ್ಯಲೊ
ಳೆಱೆವೆಸದೊಳ್ ನಂಟನೆಡಱೊಳೂರಟೆವಿನೊಳಂ
ತಱಿಸಂದು ಗಂಡುತನಮನೆ
ನೆಱಿಪದವಂ ಗಂಡನಲ್ಲನೆಂತುಂ ಷಂಡಂ

ಈ ಮೇಲಿನ ಪದ್ಯದ ಆಧಾರದಿಂದ ಆ ಕಾಲದಲ್ಲಿ ತುರುಗಳನ್ನು ರಕ್ಷಿಸುವುದು, ಸ್ತ್ರೀಯರ ಮಾನ ಕಾಪಾಡುವುದು ಊರುಗಳನ್ನು ರಕ್ಷಿಸುವುದು ಗಂಡಸರ ಪರಮ ಕರ್ತವ್ಯವಾಗಿತ್ತು. ಯಾವ ಕಾರಣದಿಂದಲಾದರೂ ಶತ್ರುಗಳು ದನಗಳನ್ನು ಅಪಹರಿಸಿದಾಗ ಆ ದನಗಳನ್ನು ರಕ್ಷಿಸಿಕೊಳ್ಳಲು ಪ್ರಾಣವನ್ನೂ ಲೆಕ್ಕಿಸದೆ ಹೋರಾಡುತ್ತಿದ್ದರು. ಆ ಹೋರಾಟದಲ್ಲಿ ಕೆಲವರು ಗೆದ್ದು ಹಿಂತಿರುಗಿ ಬಂದರೆ ಮತ್ತೆ ಕೆಲವರು ಸಾವನ್ನಪ್ಪುತ್ತಿದ್ದರು. ಇಂತಹ ವೀರರ ನೆನಪಿಗಾಗಿ ನಿಲ್ಲಿಸಿದ ವೀರಗಲ್ಲುಗಳನ್ನು ನಾವು ಸುಲಭವಾಗಿ ಗುರುತಿಸಬಹುದು. ವೀರಗಲ್ಲುಗಳ ಹೋರಾಟದ ಹಂತದ ಶಿಲ್ಪದಲ್ಲಿ ಯಾವುದಾದರೂ ಒಂದು ಕಡೆ ಕೆಲವು ದನಗಳು ನಿಂತಿರುವಂತೆ ಚಿತ್ರಿಸಿರುತ್ತಾರೆ.

ಆರಂಭ ಕಾಲದ ವೀರಗಲ್ಲುಗಳಲ್ಲಿ ವೀರನ ಸಮೀಪ ಸಣ್ಣದಾಗಿ ದನಗಳ ಚಿತ್ರವನ್ನು ಬಿಡಿಸುವ ಪದ್ಧತಿಯಿದ್ದು, ಒಂದೇ ಹಂತದಲ್ಲಿ ಶಿಲ್ಪವಿರುತ್ತಿತ್ತು. ನಂತರದ ಕಾಲದ ವೀರಗಲ್ಲುಗಳಲ್ಲಿ ಎರಡರಿಂದ ನಾಲ್ಕು ಹಂತದವರೆಗೆ ಶಿಲ್ಪವಿದ್ದು ಹೋರಾದ ಹಂತದಲ್ಲಿ ದನಗಳು ಸಾಲಾಗಿ ನಿಂತಿರುವಂತೆ ಬಿಡಿಸಲಾಗುತ್ತದೆ.

ಬೇಗೂರಿನ ವೀರಗಲ್ಲಿನಲ್ಲಿ ವೀರನನ್ನು ಒಂದು ಚೌಕಟ್ಟಿನಲ್ಲಿ ಚಿತ್ರಿಸಿ, ದನಗಳನ್ನು ಆ ಚೌಕಟ್ಟಿನಿಂದ ಹೊರಗೆ ಬಿಡಿಸಲಾಗಿದೆ. ಇಲ್ಲಿನ ವೀರನಿಗೆ ತಲೆಯಿಂದ ಕಾಲ ಮಂಡಿಯವರೆಗೂ ಬಾಣಗಳು ಚುಚ್ಚಿರುವಂತೆ ಚಿತ್ರಿಸಲಾಗಿದ್ದು, ಆತನ ಒಂದು ಕೈಯಲ್ಲಿ ಬಿಲ್ಲು, ಮತ್ತೊಂದು ಕೈಯಲ್ಲಿ ಚೂರಿಯಿದೆ. ಸಾಲಾಗಿ ಚಿತ್ರಿಸಿರುವ ದನಗಳಲ್ಲಿ ಎರಡು ದನಗಳು ಹಿಂದಕ್ಕೆ ತಿರುಗಿ ಹೊರಟಿವೆ. ನಗರಗೆರೆಯ ಒಂದು ವೀರಗಲ್ಲಿನಲ್ಲಿ ವೀರನನ್ನು ದೊಡ್ಡದಾಗಿ ಚಿತ್ರಿಸಿ ಅವನ ಪಕ್ಕದಲ್ಲಿ ದನಗಳನ್ನು ಚಿಕ್ಕದಾಗಿ ಚಿತ್ರಿಸಲಾಗಿದೆ. ವೀರನು ಕೈಯಲ್ಲಿ ಉದ್ದವಾದ ಭರ್ಜಿಯನ್ನು ಹಿಡಿದಿದ್ದು ಅವನ ಮೈಗೆಲ್ಲ ಶತ್ರುಗಳು ಪ್ರಯೋಗ ಮಾಡಿದ ಬಾಣಗಳು ನಾಟಿಕೊಂಡಿವೆ. ಹೆಡಗೇನಹಳ್ಳಿಯ ಒಂದು ವೀರಗಲ್ಲಿನ ತಳಭಾಗದ ಬಲಮೂಲೆಯಲ್ಲಿ ಎರಡು ದನಗಳು ಹಿಂತಿರುಗಿ ಹೊರಟಿವೆ. ವೀರನು ಬಿಲ್ಲು ಹಾಗೂ ಚೂರಿಯನ್ನು ಹಿಡಿದು ಹೋರಾಡುತ್ತಿದ್ದಾನೆ. ಈ ಮೇಲಿನ ಮೂರು ವೀರಗಲ್ಲುಗಳಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುವಂತೆ ಚಿತ್ರಿಸಲಾಗಿದೆ. (ಪರಮಶಿವಮೂರ್ತಿ.ಡಿ.ವಿ, ೧೯೯೯, ಪು-೭೯)

ಬೇಗೂರಿನ ಮತ್ತೊಂದು ವೀರಗಲ್ಲಿನ ಕೆಳಹಂತದಲ್ಲಿ ಎರಡು ಸಾಲು ದನಗಳ ಚಿತ್ರಣವಿದೆ. ಮೇಲಿನ ಸಾಲಿನಲ್ಲಿ ಎರಡು ದನಗಳು, ಎರಡು ಎಮ್ಮೆಗಳಿವೆ. ಕೆಳಗಿನ ಸಾಲಿನಲ್ಲಿ ಮೂರು ದನಗಳ ಚಿತ್ರಣವಿದೆ. ಈ ಚಿತ್ರಗಳಿಂದ ಶತ್ರುಗಳು ಎಮ್ಮೆಗಳನ್ನೂ ಅಪಹರಿಸುತ್ತಿದ್ದರೆಂದು ತಿಳಿದುಬರುತ್ತದೆ. ಮಧ್ಯದ ಹಂತವನ್ನು ಎರಡು ಭಾಗಗಳಾಗಿ ಮಾಡಿ ಒಂದೊಂದು ಭಾಗದಲ್ಲಿ ಒಬ್ಬೊಬ್ಬ ವೀರ ಹೋರಾಡುತ್ತಿರುವಂತಿದೆ. ಎರಡನೆ ಹಂತದಲ್ಲಿ ಇಬ್ಬರು ವೀರರೂ ಅಪ್ಸರೆಯರೊಡನೆ ಕುಳಿತಿದ್ದಾರೆ. ಮೇಲೆ ವಿವರಿಸಿದ ಯಾವ ವೀರಗಲ್ಲಿನಲ್ಲಿಯೂ ಶತೃಗಳ ಚಿತ್ರಣವಿಲ್ಲ. ಕೇವಲ ವೀರರು ಮತ್ತು ದನಗಳ ಶಿಲ್ಪ ಮಾತ್ರವಿದೆ. ಹೊಸಹೊಳಲಿನ ಒಂದು ಶಾಸನಪಠ್ಯದಲ್ಲಿ ವೀರನು ಎಮ್ಮೆಗಳನ್ನು ಶತ್ರುಗಳಿಂದ ಬಿಡಿಸಿದ ವಿಷಯವಿದೆ. ಕೊಪ್ಪಳ ತಾಲ್ಲೂಕಿನ ಬೂದಿಗುಂಪ ಗ್ರಾಮದಲ್ಲಿ ಎಮ್ಮೆಗಳ ಚಿತ್ರಣವಿರುವ ವೀರಗಲ್ಲೊಂದು ದೊರಕಿದೆ. ಪ್ರಸ್ತುತ ಕುರುಗೋಡು ಪರಿಸರದಲ್ಲಿ ತುರುಗೋಳು ಶಾಸನದ ಉಲ್ಲೇಖ ದೊರೆಯುತ್ತದೆ.

ಕುರುಗೋಡಿನ ಒಂದು ಶಾಸನದಲ್ಲಿ ದೇವಗಾವುಂಡ ಮತ್ತು ಮಲ್ಲಗಾವುಂಡ ಎಂಬುವರು ದನಗಳನ್ನು ರಕ್ಷಿಸಲು ಹೋಗಿ ಪ್ರಾಣ ತೆರುತ್ತಾರೆ. ಇವರ ಹೆಣಗಳನ್ನು ತುಳಿದುಕೊಂಡೇ ದನಗಳು ಊರಿಗೆ ಮರಳುತ್ತವೆ.

ಮಾಗಡಿರಸ್ತೆಯ ತಾವರೆಕೆರೆಯಲ್ಲಿನ ಮೂರು ತುರುಗೋಳ್ ವೀರಗಲ್ಲುಗಳು ಬಹಳ ಸ್ವಾರಸ್ಯವಾಗಿದೆ. ಒಂದು ವೀರಗಲ್ಲಿನಲ್ಲಿ ವೀರನು ಕುದುರೆಯ ಮೇಲಿರುವ ಶತ್ರುವನ್ನು ಕೊಂದು ಕೆಳಕ್ಕೆ ಬೀಳಿಸಿ, ಅವನ ಕುದುರೆಯನ್ನು ಸೆರೆಹಿಡಿದಿದ್ದಾನೆ. ಇವನ ಹಿಂದೆ ದನಗಳ ಚಿತ್ರಣವಿದೆ. ಶತ್ರುವಿನೊಡನೆ ಹೋರಾಡಿ ಅವನನ್ನು ಕೊಂದು, ಅವನ ಕುದುರೆಯನ್ನು ಸೆರೆ ಹಿಡಿದು ದನಗಳನ್ನು ಊರಿಗೆ ಮರಳಿಸಿದ ವಿಷಯವನ್ನು ಈ ಶಿಲ್ಪ ತಿಳಿಸುತ್ತದೆ.

ಶಿಕಾರಿಪುರ ತಾಲ್ಲೂಕಿನ ಒಂದು ಶಾಸನದಲ್ಲಿ ವೀರನೊಬ್ಬನು 'ಮೇಲಾಳಂನಿಜೆದು' ಕುದುರೆಯಂ ಪಿಡಿದು ಶತ್ರುಗಳನ್ನು ಗೆದ್ದು ದನಗಳನ್ನು ರಕ್ಷಿಸಿದ ವಿಷಯವಿದೆ. ಚಿಕ್ಕಮಗಳೂರು ತಾಲ್ಲೂಕಿನ ಒಂದು ಶಾಸನದಲ್ಲಿಯೂ ದನಗಳನ್ನು ಅಪಹರಿಸಲು ಬಂದವರ ಕುದುರೆಯನ್ನು ಸೆರೆ ಹಿಡಿದ ವಿಷಯ ತಿಳಿಯುತ್ತದೆ. ನಲ್ಕುದುರೆಯ ಒಂದು ವೀರಗಲ್ಲಿನಲ್ಲಿ ವೀರನು ಕುದುರೆಯ ಮೇಲೆ ಕುಳಿತವರೊಡನೆ ಹೋರಾಡುತ್ತಿದ್ದಾನೆ. ದನಗಳು ಗಾಬರಿಯಿಂದ ತಮ್ಮ ಬಾಲಗಳನ್ನು ಮೇಲಕ್ಕೆ ಎತ್ತಿ ಕುತೂಹಲದಿಂದ (ಅಥವಾ ಹೆದರುತ್ತಾ) ಹೋರಾಟವನ್ನು ನೋಡುತ್ತಾ ನಿಂತಿವೆ. (ಪರಮಶಿವಮೂರ್ತಿ.ಡಿ.ವಿ, ೧೯೯೯, ಪು-೭೯)

ಒಟ್ಟಿನಲ್ಲಿ ವೀರಗಲ್ಲು ಶಾಸನದ ಅರ್ಥ ಇಷ್ಟೇ ವೀರನೊಬ್ಬನ ನೆನಪಿಗಾಗಿ ನಿಲ್ಲಿಸಿದ ಶಿಲೆಯೇ ವೀರಶಾಸನ ಅಥವಾ ವೀರಗಲ್ಲು ಶಾಸನ. ಯಾವುದೇ ಹೋರಾಟದಲ್ಲಿ ಮಡಿದ ವೀರನ ನೆನಪಿಗಾಗಿ ನೆಟ್ಟ ಕಲ್ಲುಗಳನ್ನು ವೀರಸ್ಮಾರಕಗಲ್ಲುಗಳೆಂದು ಕರೆಯುತ್ತಾರೆ. ಈ ವೀರಗಲ್ಲುಗಳು ಬರಹವನ್ನು ಮಾತ್ರವಲ್ಲದೇ ಶಿಲ್ಪದ ವಿವರಗಳನ್ನು ಹೊಂದಿರುತ್ತದೆ. ಅಂದರೆ ಶಾಸನ ಸ್ಮಾರಕವಾಗಿದಿದ್ದೆಯೋ ಆ ವೀರನ ಪರಾಕ್ರಮವನ್ನು ಸಾರುತ್ತದೆ.

ವೀರನ ಪರಾಕ್ರಮವನ್ನು ಮೆಚ್ಚಿ ವೀರಗಲ್ಲನ್ನು ನಡೆಯುವುದು. ಲೌಕಿಕ ಉದ್ದೇಶವಾಗಿದ್ದರೆ, ಮಡಿದ ವೀರನಿಗೆ ವೀರಗಲ್ಲನ್ನು ನಿಲ್ಲಿಸುವುದು. ತಮ್ಮ ಕರ್ತವ್ಯ ಎಂದು ಭಾವಿಸಿ ಹಾಗೆ ವೀರಗಲ್ಲು ನಿಲ್ಲಿಸುವುದರ ಮೂಲಕ ಅವನಿಗೆ ಸ್ವರ್ಗವೋ, ಕೈಲಾಸವೋ, ವೈಕುಂಠವೋ. ಪ್ರಾಪ್ತವಾಗುತ್ತದೆ ಎಂಬ ನಂಬಿಕೆಗಾಗಿ ವೀರಗಲ್ಲುಗಳನ್ನು, ನಿಲ್ಲಿಸುತ್ತಿದ್ದರು. ಇದು ಪರಾಮಾರ್ಥಿಕ ಉದ್ದೇಶವಾಗಿದೆ. (ಆರ್. ಶೇಷಶಾಸ್ತ್ರೀ ೧೯೮೨, ಪುಟ-೭) ಎಲ್ಲಾ ಮಾಹಿತಿಗಳ ಆಧಾರದ ಮೇಲೆ ಹೇಳುವುದಾದರೆ ವೀರಗಲ್ಲು ನಿಲ್ಲಿಸುವಲ್ಲಿನ ಪ್ರಮುಖ ಉದ್ದೇಶ ವೀರನ ಪರಾಕ್ರಮವನ್ನು ಲೋಕಕ್ಕೆ ತಿಳಿಯುವಂತೆ ಮಾಡಿರುವುದರಿಂದ ಅದರಿಂದ ಅಂದಿನ ತಲೆಮಾರಿನ ಸಂಸ್ಕೃತಿಯನ್ನು ತಿಳಿಯಬಹುದು. (ಆರ್. ಶೇಷಶಾಸ್ತ್ರೀ ೧೯೮೨, ಪುಟ-೭೨) ವೀರಗಲ್ಲುಗಳ ಮಧ್ಯೆ ಪಟ್ಟಿಕೆಯಲ್ಲಿ ವೀರಗಲ್ಲನ್ನು ನಿಲ್ಲಿಸುವ ಉದ್ದೇಶ, ಸ್ಮರಣಾರ್ಥಕವಾಗಿ ನಿಲ್ಲಿಸಿದವನ ಹೆಸರು ಬರೆಯಲ್ಪಟ್ಟಿರುತ್ತದೆ. ಪ್ರಸ್ತುತ ಅಧ್ಯಯನ ಕುರುಗೋಡು ಪರಿಸರದ ವೀರಗಲ್ಲುಗಳ ಪ್ರಸ್ತಾವನೆ ಇಲ್ಲಿದೆ.

ಕುರುಗೋಡಿನ ಉಂಡಲಿ ಸಂಗಮೇಶ್ವರ ದೇವಾಲಯದ ಹತ್ತಿರ ಒಂದು ಶಾಸನವಿದೆ. ಅದು ವೀರಶಾಸನವಾಗಿದೆ. ಅದರ ಕಾಲ ಶಕವರ್ಷ ೧೧೯೫ನೆಯ ವಿಜಯ, ಮಾರ್ಗಶಿರ, ಅಮವಾಸ್ಯೆಯ ಸೋಮವಾರ, ಸೂರ್ಯಗ್ರಹಣವೆಂದಿದ್ದು, ಇದು ಕ್ರಿ.ಶ. ೬-೧೨-೧೧೭೩ರ ಗುರುವಾರಕ್ಕೆ ಸರಿಹೊಂದುತ್ತದೆ. ಕಲ್ಯಾಣದಿಂದ ರಾಜ್ಯವನ್ನು ಆಳುತ್ತಿದ್ದ ತ್ರಿಭುವನ ಮಲ್ಲಸೋಮೇಶ್ವರನ ಸಾಮಂತ ಕುರುಗೋಡುನ ಸಿಂಧವಂಶದ ೨ನೇ ರಾಚಮಲ್ಲನ ಸಾಮಂತ ಹಡಪಳವಳ ದಂಡನಾಯಕ ಬೇಚಿ ರಾಜನು ಸ್ವಯಂಭು ದೇವರ ದೇವಾಲಯವನ್ನು ಕಟ್ಟಿಸಿದನು.

**ಕುರುಗೋಡು ಪರಿಸರದ ವೀರಗಲ್ಲುಗಳ ಶಾಸನದ ಸಾರಾಂಶ:**

| | |
|---|---|
| ಶಾಸನದ ಸಂಖ್ಯೆ | : ೧ |
| ಗ್ರಾಮ | : ಕುರುಗೋಡು |
| ಸ್ಥಳ | : ಸಂಗಮೇಶ್ವರ ದೇವಸ್ಥಾನ |
| ಲಿಪಿ ಮತ್ತು ಭಾಷೆ | : ಕನ್ನಡ |
| ವರದಿ/ಪ್ರಕಟಣೆ | : ದೇವರಕೊಂಡಾರೆಡ್ಡಿ |
| ಕಾಲ | : ೧೯ನೆಯ ಶತಮಾನ |

ಕುರುಗೋಡಿನ ಉಂಡಲಿ ಸಂಗಮೇಶ್ವರ ದೇವಾಲಯದ ಹತ್ತಿರ ಒಂದು ಶಾಸನವಿದೆ. ಅದು ವೀರಶಾಸನವಾಗಿದೆ. ಅಂದರೆ ಶಕವರ್ಷ ೧೧೯೫ನೆಯ ವಿಜಯ, ಮಾರ್ಗಶಿರ, ಅಮವಾಸ್ಯೆಯ, ಸೋಮವಾರ, ಸೂರ್ಯಗ್ರಹಣದಂದು ಕ್ರಿ.ಶ. ೦೬.೧೨.೧೧೭೭ರ ಗುರುವಾರಕ್ಕೆ ಸರಿಹೊಂದುತ್ತದೆ. ಕಲ್ಯಾಣದಿಂದ ರಾಜ್ಯವನ್ನು ಆಳುತ್ತಿದ್ದ ತ್ರಿಭುವನ ಮಲ್ಲ ಸೋಮೇಶ್ವರನ ಸಾಮಂತ ಕುರುಗೋಡುನ ಸಿಂದ ವಂಶದ ೨ನೆಯ ರಾಚಮಲ್ಲನ ಸಾಮಂತ ಹಡಪಳವಳ ದಂಡನಾಯಕ ಬೇಚಿ ರಾಜನು ಸ್ವಯಂಭುದೇವರ ದೇವಾಲಯವನ್ನು ಕಟ್ಟಿಸಿದನು. ೧ನೆಯ ರಾಚಮಲ್ಲ ಶ್ರೀಪುರವನ್ನು ಒಂದು ಅಗ್ರಹಾರವನ್ನಾಗಿ ಶಕ ೧೧೦೩ ಪ್ಲವ ಕಾರ್ತಿಕ ಮಣ್ಯ ಸೋಮವಾರ ಸೋಮಗ್ರಹಣ ಅಂದರೆ ಕ್ರಿ.ಶ. ೨೪.೧೦.೧೧೮೧ರಂದು ಶನಿವಾರ ಶಿವಾಚಾರ್ಯರ ಕಾಲವನ್ನು ತೊಳೆದು ದಾನವಾಗಿ ಮಾಡಿದನು. ಬೇಚಿಯ ತೀರಿಕೊಂಡಾಗ ಅವನೊಡನೆ ಅವನ ಮಡದಿಯಾದ ಬೈಳಿಯಕ್ಕ ಹಾಗೂ ಮಳ್ವಾಣಿಯನ್ನು ಅಗ್ನಿಗೆ ಆತ್ಮಾರ್ಪಣೆಯನ್ನು ಮಾಡಿಕೊಂಡಿರುತ್ತಾರೆ. ಇದರ ಸವಿನೆನಪಿಗಾಗಿ ಕಟ್ಟಿದ ಸ್ಮಾರಕ ಶಾಸನ ಇದಾಗಿದೆ.

## ೩.೪. ಮಹಾಸತಿ ಶಾಸನಗಳು:

ಪತಿಯು ಕಾರಣಾಂತರಗಳಿಂದ ಮಡಿದಾಗ ಅವನ ಸತಿಯೂ ಕೂಡ ಬೆಂಕಿಗೆ ಬಿದ್ದು,

ಪ್ರಾಣವನ್ನು ಅರ್ಪಿಸುತ್ತಿದ್ದಳು. ಇದು ಅವಳ ಪತಿಭಕ್ತಿಯನ್ನು ತೋರಿಸುವ ಆಚರಣೆಯಾದರೂ ಇದರ ಹಿಂದೆ ಸಾಮಾಜಿಕ ಕಟ್ಟಳೆಗಳು, ಸಂಪ್ರದಾಯಗಳು, ಶೋಷಣೆಯ ಅಂಶಗಳು ಬಲವಾದ ಪ್ರೇರಣೆಯನ್ನು ನೀಡುತ್ತಿದ್ದವು. ಗಂಡನ ಹಿಂದೆಯೇ ಸತಿ ಹೋಗದವಳಿಗೆ ಸಮಾಜದಲ್ಲಿ ಅಷ್ಟಾಗಿ ಗೌರವವಿರಲಿಲ್ಲ. ಅಲ್ಲದೇ ಪ್ರಾಚೀನ ಕಾಲದಲ್ಲಿ ಪತಿಯಿಲ್ಲದೆ ಸತಿಗೆ ಬದುಕು ಹಾಗೂ ರಕ್ಷಣೆಗೆ ಅನ್ಯಮಾರ್ಗವಿಲ್ಲದೆ ಈ ರೀತಿ ಆಚರಣೆಯನ್ನು ಅನಿವಾರ್ಯವಾಗಿಯಾದರೂ ಆಚರಿಸಬೇಕಾಗಿತ್ತು. ಕರ್ನಾಟಕದ ಮಹಿಳೆಯರು ಈ ಪದ್ಧತಿಯನ್ನು ನಿರಾಕರಿಸಿದ್ದ ಬಗ್ಗೆ ಶಾಸನಗಳಲ್ಲಿ ಎಲ್ಲೂ ಉಲ್ಲೇಖ ದೊರೆಯುವುದಿಲ್ಲ.

ಮಹಾಸತಿ ಶಾಸನಶಿಲ್ಪಗಳನ್ನು ಅಧ್ಯಯನ ಮಾಡಲು ಹೊರಟಾಗ ನಮಗೆ ಈ ಆಚರಣೆಯ ಒಳಿತು–ಕೆಡುಕುಗಳ ಬಗ್ಗೆ ವಿವೇಚಿಸುವುದು ಎರಡನೆಯ ಮಾತಾಗುತ್ತದೆ. ಅಧ್ಯಯನದ ದೃಷ್ಟಿಯಿಂದ ಮಹಾಸತಿಶಿಲ್ಪಗಳನ್ನು ಮುಖ್ಯವಾಗಿ ಎರಡು ಭಾಗ ಮಾಡಿಕೊಳ್ಳಬಹುದು. ಒಂದು ಸಹಗಮನಶಿಲ್ಪ ಮತ್ತೊಂದು ಅನುಗಮನಶಿಲ್ಪ.

**ಸಹಗಮನಶಿಲ್ಪ:** ಪತಿಯು ಮಡಿದಾಗ ಅವನ ಶವದ ಜೊತೆಯಲ್ಲಿಯೇ ಚಿತೆಗೆ ಬಿದ್ದು ಅಥವಾ ಸಮಾಧಿಯಲ್ಲಿ ಹುಗಿಸಿಕೊಂಡು ಪ್ರಾಣ ಬಿಡುತ್ತಿದ್ದ ಆಚರಣೆಯು 'ಸಹಗಮನ'ವೆನಿಸುತ್ತದೆ. ಮಾಸ್ತಿಕಲ್ಲುಗಳ ಅಧ್ಯಯನದಲ್ಲಿ ನಮಗೆ ತೊಡಕಾಗುವ ಅಂಶವೆಂದರೆ ಬಹುತೇಕ ಮಾಸ್ತಿಕಲ್ಲುಗಳಲ್ಲಿ ಬರಹವಿಲ್ಲದಿರುವ ಅಂಶವೆ. ಇದರಿಂದಾಗಿ ಆ ಶಾಸನ ಶಿಲ್ಪವು ಅನುಗಮನವೆ ಅಥವಾ ಸಹಗಮನವೆ ಎಂದು ನಿರ್ಧರಿಸಲಾಗುವುದಿಲ್ಲ. ಶಿಲ್ಪದಲ್ಲಿ ಪತಿಯ ಜೊತೆ ಸಾಯುತ್ತಿರುವ ವಿವರಣೆ ಇದ್ದಲ್ಲಿ ಮಾತ್ರ, ಆ ಶಾಸನಗಳು ಸಹಗಮನ ಶಿಲ್ಪಗಳು ಎಂದು ಗುರುತಿಸಬಹುದು. ಹೀಗಾಗಿ ಈ ವಿಭಾಗದಲ್ಲಿ ಸಹಗಮನವೆನ್ನಲು ಸಾಕ್ಷಿಯಿರುವ ಶಾಸನಪಾಠ ಮತ್ತು ಶಿಲ್ಪವನ್ನು ಮಾತ್ರ ಗಮನಿಸಲಾಗಿದೆ. ಐದು ಅಥವಾ ಆರನೆಯ ಶತಮಾನದ ಕವಡಿ ಗ್ರಾಮದ ಶಾಸನ ಬಹುಶಃ ಕದಂಬ ರವಿವರ್ಮನ ರಾಣಿಯ ಸಹಗಮನವನ್ನು ಸೂಚಿಸುತ್ತಿದ್ದು, ಇದು ನಮ್ಮ ನಾಡಿನಲ್ಲಿ ಈ ಪದ್ಧತಿಯನ್ನು ಕುರಿತು ಪ್ರಥಮ ದಾಖಲೆಯಾಗಿದೆ.

ಕಳ್ಳರು ಊರನ್ನು ಸೂರೆಗೊಳ್ಳುವಾಗ ಹೋರಾಡಿ ಮಡಿದ ಯೇಚಗೌಡನ ಹೆಂಡತಿ ಸಹಗಮನ ಮಾಡುತ್ತಾಳೆ. ಮಹದೇವಿ ಎಂಬುವಳು ಸಹಗಮನ ಮಾಡಿದ ವಿಷಯ ಕ್ರಿ.ಶ. ೧೧೫೦ರ ಶಾಸನವೊಂದರಲ್ಲಿದೆ. 'ಸಕಲಗುಣ ಸಂಪನ್ನನಪ್ಪ ಗಣೇಶ್ವರನು ಆತನ ಪ್ರಾಣೇಶ್ವರಿ ಬೊಂಮಾಯಿ ಕೂಡಿ ಪತಿಬ್ರತಾ ಗುಣದಿಂ ಅಗ್ನಿ ಪ್ರವೇಶಂಮಾಡಿ ಸಂಗ್ರಾಮ ರಂಗದೊಳು ಸ್ವರ್ಗಪ್ರಾಪ್ತರಾಗುತ್ತಾರೆ.' ಬೊಮ್ಮಗವುಡ ಸ್ವರ್ಗಸ್ಥಾನದಲ್ಲಿ ಆತನ ಮದವಳಿಗೆ ಬೊಮ್ಮಿಗವುಡಿ

ಸಮಾಧಿ ಕುಳಿತು ಸ್ವರ್ಗಕ್ಕೆ ಸಂದಳು. ಎಡಗವುಡರು ಸ್ವರ್ಗಸ್ಥರಾದರು. ಅವರ ಮದವಳಿಗೆ ಚಿಕ್ಕಗುವುಡಿ ಅವರ ಕೂಡೆ ಸಮಾಧಿಯನು ಪೊಕೆ ಸ್ವರ್ಗಸ್ಥರಾದರು. ರಾಮಗವುಡ ಮತ್ತು ಬೊಮ್ಮಕ್ಕ ಭಯಿರಗವುಡ ಮತ್ತು ಬಯಿರಗವುಡಿ ಬೊಮ್ಮಂಣ ಮತ್ತು ನಾಗಾಯಿ ನಾಗಂಣನಾಯಕ ಮತ್ತು ಅವನ ಹೆಂಡತಿ ನಾಗಮ್ಮ ಮತ್ತು ಅವಳ ಪತಿ ಹಾಗೂ ಮತ್ತಿಬ್ಬರು ಸಹಗಮನವನ್ನು ಕೈಗೊಂಡ ಉಲ್ಲೇಖಗಳಿವೆ.

ಸಸ್ತಾಪುರದ ಮಾಸ್ತಿಶಿಲ್ಪದಲ್ಲಿ ಅಪರೂಪದ ಸಹಗಮನ ಚಿತ್ರವಿದೆ. ಮಾಸ್ತಿಶಿಲೆಯ ತಳಭಾಗದಲ್ಲಿ ನಾಲ್ಕು ಯಾಳಿಯ ಮುಖಗಳನ್ನು ಚಿತ್ರಿಸಲಾಗಿದೆ. ಅದರ ಮೇಲೆ ವೃತ್ತಾಕಾರದ ಸಮಾಧಿಗುಡಿಯಲ್ಲಿ ಮಡಿದ ವೀರ ಮತ್ತು ಅವನ ಹೆಂಡತಿ ಮಲಗಿದ್ದಾರೆ. ಇಲ್ಲಿ ಸತಿಯು ಮಲಗಿದ್ದಲ್ಲಿಯೇ ತನ್ನ ಬಲಗೈಯನ್ನು ಮೇಲೆತ್ತಿ ಜನರನ್ನು ಹರಸುತ್ತಿರುವಳು. ಸಮಾಧಿಯ ಮೇಲ್ಭಾಗದಲ್ಲಿ ಕಂಬದಿಂದ ಹೊರಟ ತೋಳನ್ನು ಬಿಡಿಸಲಾಗಿದೆ. ಕಂಬದ ಹಿಂಭಾಗದಲ್ಲಿ ಕುದುರೆಯ ಮೇಲಿರುವ ವೀರನನ್ನು, ಅವನನ್ನು ಇರಿಯುತ್ತಿರುವ ಇಬ್ಬರು ಶತ್ರುಗಳನ್ನು ಬಿಡಿಸಲಾಗಿದೆ. ನಂತರದ ಹಂತದಲ್ಲಿ ಶಿವಲಿಂಗ ಮತ್ತು ಭಕ್ತಿಯಿಂದ ಕುಳಿತ ಸತಿ–ಪತಿಯರನ್ನು ಚಿತ್ರಿಸಲಾಗಿದೆ. ಈ ಶಿಲ್ಪದ ಮತ್ತೊಂದು ವೈಶಿಷ್ಟ್ಯವೆಂದರೆ ವೀರನ ಕುದುರೆಯ ಶಿಲ್ಪದ ಕೆಳಭಾಗದಲ್ಲಿ ಚೌಕಟ್ಟನ್ನು ಬಿಡಿಸುವುದರ ಮೂಲಕ ಕೋಟೆಯನ್ನು ಚಿತ್ರಿಸಲಾಗಿದೆ. ಅದರ ಮುಂದೆ ವ್ಯಕ್ತಿಯೊಬ್ಬ ನಿಂತಿರುವಂತಿದೆ. ಕೋಟೆ ಕಾಳಗದಲ್ಲಿ ಮಡಿದ ಪತಿಯ ಜೊತೆಯಲ್ಲಿಯೇ ಅವನ ಹೆಂಡತಿಯೂ ಸಮಾಧಿ ಮರಣ ಹೊಂದಿದ ಘಟನೆಯನ್ನು ಈ ಶಾಸನಶಿಲ್ಪ ಬಹು ಸಮರ್ಥವಾಗಿ ತಿಳಿಸುತ್ತದೆ.

**ಅನುಗಮನ ಶಾಸನಶಿಲ್ಪ:** ಶಾಸನ ಶಿಲ್ಪಗಳಲ್ಲಿ ಸಹಗಮನವನ್ನು ಸೂಚಿಸುವ ಶಿಲ್ಪವಾಗಲೀ ಅಥವಾ ಪಾಠವಾಗಲೀ, ಇಲ್ಲದಿದ್ದ ಪಕ್ಷದಲ್ಲಿ ಇಂತಹ ಶಾಸನಶಿಲ್ಪಗಳನ್ನು ಅನುಗಮನ ಶಿಲ್ಪಗಳು ಎಂದು ಭಾವಿಸಿ ಈ ಉಪವಿಭಾಗದಲ್ಲಿ ಚರ್ಚಿಸಲಾಗಿದೆ. 'ಅನುಗಮನ'ವೆಂದರೆ ದೂರದಲ್ಲೆಲ್ಲೋ ತನ್ನ ತಿ ಮಡಿದ ವಾರ್ತೆಯನ್ನು ಕೇಳಿದ ನಂತರ ಸತಿಯು ಮಹಾಸತಿಯಾಗುವುದು. ಅನುಗಮನ ಶಾಸನಶಿಲ್ಪಗಳನ್ನು ಪೂರ್ಣ ಸತಿಶಿಲ್ಪ, ಪೂರ್ಣಸತಿ ಮತ್ತು ಇತರರ ಶಿಲ್ಪ, ಇಬ್ಬರು ಸತಿಯರ ಪೂರ್ಣಶಿಲ್ಪ ಮತ್ತು ಇತರರ ಶಿಲ್ಪ, ವೀರಮಾಸ್ತಿಶಿಲ್ಪ, ಹಂತಗಳಿರುವ ವೀರಮಾಸ್ತಿಶಿಲ್ಪ, ಬಹುಕ್ಕೆ ಮಾಸ್ತಿಶಿಲ್ಪ ಎಂದು ಹಲವು ರೀತಿಯಲ್ಲಿ ವಿಭಾಗಿಸಬಹುದು.

**ಪೂರ್ಣಸತಿಶಿಲ್ಪ:** ಪೂರ್ಣ ಸತಿಶಿಲ್ಪವೆಂದರೆ ಶಾಸನಫಲಕದಲ್ಲಿ ಕೇವಲ ಮಹಿಳೆಯೊಬ್ಬಳ ಚಿತ್ರ ಮಾತ್ರ ಇರುತ್ತದೆ. ಇಲ್ಲಿ ಬೇರೆ ಇನ್ನಾರ ಶಿಲ್ಪವೂ ಇರುವುದಿಲ್ಲ. ಹೀಗಾಗಿ ಇದು ನೋಡಲು ದೇವತೆಯ ಮೂರ್ತಿಯಂತೆ ಕಾಣುತ್ತದೆ. ಆದರೆ ಎಡಕ್ಕೆಯಲ್ಲಿ ಕಮಂಡಲ ಹಿಡಿದು ಬಲಗೈಯನ್ನು ಮೇಲಕ್ಕೆ ಎತ್ತಿ ಹರಸುತ್ತಿರುವ ಭಂಗಿಯಲ್ಲಿರುತ್ತದೆ.

ಅಬ್ಬಲೂರಿನ ಕೆರೆಯ ಬಳಿ ಈ ರೀತಿಯ ಒಂದು ಶಿಲ್ಪವಿದೆ. ಇದರ ಕಾಲ ಕ್ರಿ.ಶ. ಸು.೧೧ನೆಯ ಶತಮಾನವಾಗಿದ್ದು, ನಾಲ್ಕು ಅಡಿ ಎತ್ತರವಿದೆ. ನೆಟ್ಟಗೆ ನಿಂತಿರುವ ಮಹಾಸತಿಯು ಎಡಗೈಯಲ್ಲಿ ಕಮಂಡಲ ಹಿಡಿದಿದ್ದು, ಬಲಗೈಯನ್ನು ಮೇಲಕ್ಕೆ ಎತ್ತಿ ಹರಸುತ್ತಿದ್ದಾಳೆ. ಬಲಗೈಯ ಹೆಬ್ಬೆರಳ ನಡುವೆ ಒಂದು ನಿಂಬೆಹಣ್ಣನ್ನು ಹಿಡಿದಿದ್ದಾಳೆ. ಕಿವಿಗೆ ದೊಡ್ಡ ರಿಂಗುಗಳನ್ನು ಹಣೆಸರ, ಕಂಠೀಹಾರ, ಕೊರಳಹಾರಗಳನ್ನು ಧರಿಸಿದ್ದಾರೆ. ಕೊರಳಹಾರ ಬಹಳ ಕಲಾತ್ಮಕವಾಗಿದೆ. ಸೀರೆಯ ನೆರಿಗೆಯ ಸೊಂಟದ ಸುತ್ತಲೂ ಹೂವಿನಂತೆ ಹರಡಿದೆ.

ಕ್ರಿ.ಶ. ೧೨ನೆಯ ಶತಮಾನದ ಹಿರೇ ಅಣಜಿಯ ಒಂದು ಮಾಸ್ತಿಕಲ್ಲು ಬಹಳ ಸುಂದರವಾಗಿದ್ದು, ಸತಿಯು ಹರಸುತ್ತಿರುವ ಕೈ ಸಾಮಾನ್ಯಕ್ಕಿಂತ ಹೆಚ್ಚಾಗಿ ಹಿಂದಕ್ಕೆ ಮಡಚಿಕೊಂಡಿದೆ. ಇದಕ್ಕೆ ಕಾರಣ ಸತಿಯ ಕೈಯನ್ನು ಕೆತ್ತಲು ಸರಿಯಾದ ಸ್ಥಳವಿಲ್ಲದೆ ಶಿಲ್ಪಿ ಈ ರೀತಿ ಮಾಡಿರಬಹುದು. ಕೈಯ ಹೆಬ್ಬೆರಳ ನಡುವೆ ನಿಂಬೆಹಣ್ಣು ಹಿಡಿದಿದ್ದಾಳೆ. ಎಡಕೈಯಲ್ಲಿ ಕಮಂಡಲವಿದೆ. ಕುತ್ತಿಗೆಗೆ ಕಂಠೀಹಾರ ಮತ್ತು ಕೊರಳಿಗೆ ಪದಕದ ಹಾರವನ್ನು ಧರಿಸಿದ್ದು, ನಡುವಿಗೆ ದಾವಣಿಯನ್ನು ಬಿಗಿದಿದ್ದಾಳೆ. ತಲೆಯ ಕೂದಲ ಗಂಟಿನ ಬಳಿ ತಾಳೆಹೂವನ್ನು ಮುಡಿದಿರುವಂತೆ ಚಿತ್ರಿಸಲಾಗಿದೆ.

ಹಿರೇಕೋಗಲೂರು ಗ್ರಾಮದ ಮಾಸ್ತಿಶಿಲ್ಪದಲ್ಲಿರುವ ಸತಿಯು ಬಹಳ ಸಣ್ಣದಾದ ನಡುವನ್ನು ಹೊಂದಿದ್ದು, ಎದೆ, ಕೊರಳ ತುಂಬ ಆಭರಣಗಳನ್ನು ಧರಿಸಿ ಕೇದಗೆ ಗರಿಗಳಿಂದ ಅಲಂಕರಿಸಿದ ಕೇಶಗಂಟನ್ನು ಹಾಕಿಕೊಂಡಿದ್ದಾಳೆ. ಸೀರೆಯ ನೆರಿಗೆ ಪಾದದವರೆಗೂ ತೆರೆತೆರೆಯಾಗಿ ಹರಡಿದೆ. ಮಾಸ್ತಿಯ ಕಂಕುಳ ಭಾಗದಲ್ಲಿ ಎರಡು ರಂಧ್ರಗಳನ್ನು ಮಾಡಲಾಗಿದ್ದು, ಇದಕ್ಕೆ ಕಾರಣ ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಸ್ಥಳೀಯರು ಹಬ್ಬ ಹರಿದಿನಗಳಲ್ಲಿ ಮಹಾಸತಿಶಿಲ್ಪಕ್ಕೆ ಹೂವಿನ ಹಾರವನ್ನು ಹಾಕಲು ಅಥವಾ ಸೀರೆ ಇನ್ನಿತರ ಬಟ್ಟೆಯನ್ನು ತೊಡಿಸಲು ಸುಲಭವಾಗಲಿ ಎಂದು ಈ ರೀತಿ ರಂಧ್ರ ಮಾಡಿರಬಹುದು.

**ಒಕ್ಕೈ ಮತ್ತು ಇಕ್ಕೈಯಿ ಮಾಸ್ತಿ ಶಾಸನ:** ಕೆಲವು ಮಹಾಸತಿಗಳ ಮೇಲೆ ಒಂದು ಕಂಬ ಮತ್ತು ಅದರ ಬಲಭಾಗದಿಂದ ಹೊರಡಿರುವ ಒಂದು ಕೈ ಇರುತ್ತದೆ. ಇದು ಒಕ್ಕೈ ಮಾಸ್ತಿಕಲ್ಲು. ಎರಡು ಕೈಗಳು ಹೊರಟಿದ್ದರೆ ಇಕ್ಕೈಲು ಮಾಸ್ತಿಗಲ್ಲು ಎಂದು ಹೆಸರಿಸುತ್ತಾರೆ. ಕೆಲವೊಮ್ಮೆ ಮಹಾಸತಿಯಲ್ಲಿ ನಿಂಬೆಹಣ್ಣು ತಲೆ ಹಿಂದೆ ಪ್ರಭಾವಳಿಯಂತೆ ಕಾಣುವ ಜ್ವಾಲೆ ಇರುತ್ತದೆ.

ಕೆಲವೊಮ್ಮೆ ಮಹಾಸತಿಯನ್ನು ವೀರನೊಡನೆ ಒಬ್ಬರಿಗಿಂತ ಹೆಚ್ಚು ಸ್ತ್ರೀಯರು ಸಹಗಮನ ಮಾಡಿದ್ದಾರೆ. ಅಷ್ಟು ಜನ ಸ್ತ್ರೀಯರು ತನ್ನ ಪತಿಯ ಬಲಗಡೆ ನಿಂತು ಎಡಗೈಯನ್ನು ಎತ್ತಿಸಿರುವ ಚಿತ್ರ, ಒಟ್ಟಾರೆ ಮೌಲ್ಯಗಳಿಗೆ ಪಣ ತೊಟ್ಟು ಬದ್ಧರಾಗಿರೆಂಬುದು ಇದು ಪ್ರತಿಬಿಂಬಿಸುತ್ತದೆ. **(ಚಿದಾನಂದಮೂರ್ತಿ ಎಂ., ೧೯೬೬, ಪುಟ-೭೮)**

ಪ್ರಸ್ತುತ ಕುರುಗೋಡು ಪ್ರದೇಶಕ್ಕೆ ಸಂಬಂಧಿಸಿದಂತೆ ಮಹಾಸತಿಗಲ್ಲುಗಳನ್ನು ಕುರುಗೋಡಿನ ದೇವಾಲಯಗಳ ಶಾಸನಗಳಲ್ಲಿ ಮಹಾಸತಿ ಅಥವಾ ಮಾಸ್ತಿಯ ಬಗ್ಗೆ ಶಾಸನಗಳು ದಾಖಲಿಸುತ್ತವೆ. ನಾವುಗಳು ಗಮನಿಸಬಹುದು. ಕುರುಗೋಡುನ ಸಂಗಮೇಶ್ವರ ದೇವಸ್ಥಾನದಲ್ಲಿ ಒಂದು ಶಾಸನವಿದೆ. ಅದು ಮಾಸ್ತಿಗಲ್ಲು ಶಾಸನವಾಗಿದೆ. ಅಂದರೆ ಶಕವರ್ಷ ೧೧೯೫ನೆಯ ವಿಜಯ ಮಾರ್ಗಶಿರ, ಅಮವಾಸ್ಯೆ, ಸೋಮವಾರ ಸೂರ್ಯಗ್ರಣವೆಂದಿದ್ದು, ಇದು ಕ್ರಿಶ. ೦೬.೧೨.೧೧೭೭ರ ಗುರುವಾರಕ್ಕೆ ಸರಿಹೊಂದುತ್ತದೆ. ಕಲ್ಯಾಣದಿಂದ ರಾಜ್ಯವನ್ನು ಆಳುತ್ತಿದ್ದ ತ್ರಿಭುವನಮಲ್ಲ ಸೋಮೇಶ್ವರನ ಸಾಮಂತ ಕುರುಗೋಡುನ ಸಿಂದವಂಶದ ೨ನೇ ರಾಚಮಲ್ಲನ ಸಾಮಂತ ಹಡಪಳವಳ ದಂಡನಾಯಕ ಬೇಚಿರಾಜನು ಸ್ವಯಂಭುದೇವರ ದೇವಾಲಯವನ್ನು ಕಟ್ಟಿಸುತ್ತಾನೆ. ಮೊದಲ ರಾಚಮಲ್ಲನ ಕಾಲದಲ್ಲಿಯೇ ಇದನ್ನು ಕಟ್ಟಲಾಗಿತ್ತು. ಮೊದಲನೆಯ ರಾಚಮಲ್ಲ ಮತ್ತು ಬೇಚರಸ ಇಬ್ಬರು ತೀರಿಕೊಂಡ ನಂತರ ಎರಡನೆಯ ರಾಚಮಲ್ಲನು ಶ್ರೀಪುರವನ್ನು ಒಂದು ಅಗ್ರಹಾರವನ್ನಾಗಿ ಶಕ ೧೧೧೦ಶಿಪ್ಲವ ಕಾರ್ತಿಕ ಪುಣ್ಣಮಿ ಸೋಮವಾರ ಸೋಮಗ್ರಹಣ ಅಂದರೆ ಕ್ರಿಶ. ೨೪.೧೦.೧೧೮೧ರ ಶನಿವಾರದಂದು ಮಾರ್ಪಡಿಸಿದ ಕೊತ್ತಲ ಜಂತೆ ಗ್ರಾಮವನ್ನು ಸ್ವಯಂಭುದೇವರ ಸ್ಥಾನಿಕ ಬಾಲ ಶಿವಾಚಾರ್ಯರ ಕಾಲವನ್ನು ತೊಳೆದು ದಾನ ಕೊಡಲಾಯಿತು. ಬೇಚಯ ತೀರಿಕೊಂಡಾಗ ಅವನೊಡನೆ ಅವನ ಮಡಿದಿಯಾದ ಬೈಳಿಯಕ್ಕ ಹಾಗೂ ಮಳ್ಳಾಣಿಯಕ್ಕ ಅಗ್ನಿಗೆ ಹೋದ ಉಲ್ಲೇಖವಿದೆ. ಇದರಿಂದ ಕುರುಗೋಡು ಪ್ರದೇಶದಲ್ಲಿ ಮಹಾಸತಿ ಅಥವಾ ಮಾಸ್ತಿಗಲ್ಲುಗಳ ಪ್ರಸ್ತಾಪವಿರುವುದನ್ನು ಕಾಣಬಹುದು. (ಚಿದಾನಂದಮೂರ್ತಿ ಎಂ., ೧೯೮೪, ಪುಟ-೭೮)

**ಕುರುಗೋಡು ಪರಿಸರದ ಮಾಸ್ತಿಗಲ್ಲುಗಳ ದಾಖಲಾತಿ**

| | |
|---|---|
| ಗ್ರಾಮ | : ಕುರುಗೋಡು |
| ಸ್ಥಳ | : ಸಂಗಮೇಶ್ವರ ದೇವಸ್ಥಾನ |
| ಲಿಪಿ ಮತ್ತು ಭಾಷೆ | : ಕನ್ನಡ |
| ವರದಿ/ಪ್ರಕಟಣೆ | : E.I. XIV. Pt.265. |
| ಕಾಲ | : ೧೯ನೆಯ ಶತಮಾನ |

ಶಕವರ್ಷ ೧೧೯೫ನೆಯ ವಿಜಯ, ಮಾರ್ಗಶಿರ ಅಮವಾಸ್ಯೆ, ಸೋಮವಾರ, ಸೂರ್ಯಗ್ರಹಣದಂದು ಇದು ಕ್ರಿಶ. ೦೬.೧೨.೧೧೭೩ರ ಗುರುವಾರಕ್ಕೆ ಸರಿಹೊಂದುತ್ತದೆ. ಕಲ್ಯಾಣದಿಂದ ರಾಜ್ಯವನ್ನು ಆಳುತ್ತಿದ್ದ ತ್ರಿಭುವನ ಮಲ್ಲಸೋಮೇಶ್ವರನ ಸಾಮಂತ ಕುರುಗೋಡಿನ

ಸಿಂದವಂಶದ ೨ನೆಯ ರಾಚಮಲ್ಲನ ಸಾಮಂತ ಹಡಪಳವಳ ದಂಡನಾಯಕ ಬೇಚಿರಾಜನು ಸ್ವಯಂಭುದೇವರ ದೇವಾಲಯವನ್ನು ಕಟ್ಟಿಸುತ್ತಾನೆ. ೧ನೆಯ ರಾಚಮಲ್ಲನು ಶ್ರೀಪುರವನ್ನು ಒಂದು ಅಗ್ರಹಾರವನ್ನಾಗಿ ಶಕ. ೧೧೦೩ ಪ್ಲವ ಕಾರ್ತಿಕ ಪೂರ್ಣಮಿ ಸೋಮವಾರ, ಸೋಮಗ್ರಹಣ ಅಂದರೆ ಕ್ರಿ.ಶ. ೨೪.೧೦.೧೧೮೧ರ ಶನಿವಾರದಂದು ಮಾರ್ಪಡಿಸಿದ ಕೊತ್ತಲ ಜಿಂತೆ ಗ್ರಾಮವನ್ನು ಸ್ವಯಂಭು ದೇವರ ಸ್ಥಾನಿಕ ಬಾಲಶಿವಾಚಾರ್ಯರ ಕಾಲವನ್ನು ತೊಳೆದು ದಾನವಾಗಿ ಕೊಡಲಾಗಿದೆ. ಬೇಚಯ ತೀರಿಕೊಂಡಾಗ ಅವನೊಡನೆ ಅವನ ಮಡದಿಯಾದ ಬೈಳಿಯಕ್ಕ ಹಾಗು ಮಳ್ವಾಣಿಯಕ್ಕ ಅಗ್ನಿಗೆ ಹೋದ ಉಲ್ಲೇಖವಿದೆ.

ಇತರೆ ಶಾಸನಗಳು

| | |
|---|---|
| ಶಾಸನದ ಸಂಖ್ಯೆ | : ೧ |
| ಗ್ರಾಮ | : ಕುರುಗೋಡು |
| ಸ್ಥಳ | : ಹನುಮಂತನ ಬೆಟ್ಟದ ಆಂಜನೇಯ ಗುಡಿ ಪೂರ್ವದಿಕ್ಕು |
| ಲಿಪಿ ಮತ್ತು ಭಾಷೆ | : ಕನ್ನಡ |
| ವರದಿ/ಪ್ರಕಟಣೆ | : AR No. 60, 1904 of sii, ix, pt. ii No. 706. |
| ಕಾಲ | : ೧೭೮೦. |

ಈ ಶಾಸನವು ಶಾಲಿವಾಹನ ಶಕವರ್ಷ ೧೭೦೨ನೆಯ ಶಾರ್ವರಿ, ಆಶ್ವೀಜ, ಶು.೧ರದ್ದಾಗಿದ್ದು, ಇದು ಕ್ರಿ.ಶ. ೨೯.೦೯.೧೭೮೦ರ ಶುಕ್ರವಾರಕ್ಕೆ ಸರಿಹೊಂದುತ್ತದೆ. ಇಮನ್‌ವಾಬ್ ಹೈದರ್ ಅಲಿಖಾನ್ ಬಹದ್ದೂರನ ಕಾಲದ್ದಾಗಿದ್ದು, ಹನುಮಂತನ ದೇವರ ದೇವಸ್ಥಾನದ ಸಂಪೂರ್ಣ ವಿಷಯವನ್ನು ತಿಳಿಸುತ್ತದೆ.

| | |
|---|---|
| ಶಾಸನದ ಸಂಖ್ಯೆ | : ೨ |
| ಗ್ರಾಮ | : ಕುರುಗೋಡು |
| ಸ್ಥಳ | : ಹನುಮಂತನ ಬೆಟ್ಟದ ಕತ್ತೇಯ ಬಂಡೆ |
| ಲಿಪಿ ಮತ್ತು ಭಾಷೆ | : ಕನ್ನಡ |
| ವರದಿ/ಪ್ರಕಟಣೆ | : AR No. 689 of sii, ix, pt. INo. 53. |
| ಕಾಲ | : ೧೯ನೆಯ ಶತಮಾನ |

ಈ ಶಾಸನವು ಸತ್ಯಾಶ್ರಯನ ಕಾಲಕ್ಕೆ ಸೇರಿದೆ. ಕುರುಗೋಡಿನಲ್ಲಿ ೧೮ ಗೇಣು ಕೋಲು ಮತ್ತು ನವಿಲು ಪೊನ್ನಿನ ಬಳಕೆ ಇತ್ತೆಂದು ಉಲ್ಲೇಖಿಸುತ್ತದೆ. ಲಿಪಿಯ ದೃಷ್ಟಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೯ನೆಯ ಶತಮಾನಕ್ಕೆ ಸೇರುತ್ತದೆ.

ಶಾಸನದ ಸಂಖ್ಯೆ : ೩

ಗ್ರಾಮ : ಕುರುಗೋಡು

ಸ್ಥಳ : ಉಜಳೇಶ್ವರ ದೇವಾಲಯದ ಗರ್ಭಗೃಹದ ಬಾಗಿಲು

ಲಿಪಿ ಮತ್ತು ಭಾಷೆ : ಕನ್ನಡ

ವರದಿ/ಪ್ರಕಟಣೆ : ದೇವರಕೊಂಡಾರೆಡ್ಡಿ

ಕಾಲ : ೧೯ನೆಯ ಶತಮಾನ

೧೯ನೆಯ ಶತಮಾನದ ಲಿಪಿ ಲೋಕಾಹುರದ ಜೋಲದೇವಿಯ ಉಲ್ಲೇಖವಿದೆ.

ಶಾಸನದ ಸಂಖ್ಯೆ : ೪

ಗ್ರಾಮ : ಕುರುಗೋಡು

ಸ್ಥಳ : ಬಾಗಿಲವಾಡ

ಲಿಪಿ ಮತ್ತು ಭಾಷೆ : ಕನ್ನಡ

ವರದಿ/ಪ್ರಕಟಣೆ : ದೇವರಕೊಂಡಾರೆಡ್ಡಿ

ಕಾಲ : ೧೯ನೆಯ ಶತಮಾನ

ಅದೇ ಕಾಲದ ಲೋಕಾಹುರದ ದೇವಲದೇವಿಯ ಉಲ್ಲೇಖವಿದೆ.

ಶಾಸನದ ಸಂಖ್ಯೆ : ೫

ಗ್ರಾಮ : ಕುರುಗೋಡು

ಲಿಪಿ ಮತ್ತು ಭಾಷೆ : ಕನ್ನಡ

ವರದಿ/ಪ್ರಕಟಣೆ : E.I. XIV. Pt.276

ಕಾಲ : ೧೨ನೆಯ ಶತಮಾನ

ಅಪೂರ್ಣ ಹಾಗೂ ತೇದಿ ಇಲ್ಲದ ಈ ಶಾಸನವು ಸಿಂದವಂಶದ ರಾಚಮಲ್ಲನನ್ನು ಹೆಸರಿಸುತ್ತದೆ. ಶಿವನು ಪಾರ್ವತಿಯೊಡನೆ ರಾಚಮಲ್ಲನಿಗೆ ದರ್ಶನವಿತ್ತು. ಅವನನ್ನು ಕೈಲಾಸಕ್ಕೆ ಕರೆದುಕೊಂಡು ಹೋದ ನಂತರ ಕುರುಗೋಡುನ ಪಶ್ಚಿಮಕ್ಕೆ ಲಿಂಗರೂಪದಲ್ಲಿ ಉದ್ಭವಿಸಿದನೆಂದು ಅದಕ್ಕೆ ರಾಚಮಲ್ಲೇಶ್ವರ ದೇವರೆಂದು ಕರೆಯಲಗಿತ್ತೆಂದು ಹೇಳಲಾಗಿದೆ.

ಶಾಸನದ ಸಂಖ್ಯೆ : ೬

ಗ್ರಾಮ : ಕೋಳೂರು

ಸ್ಥಳ : ಸೂರ್ಯದೇವಾಲಯ

ಲಿಪಿ ಮತ್ತು ಭಾಷೆ : ಕನ್ನಡ

ವರದಿ/ಪ್ರಕಟಣೆ : ದೇವರಕೊಂಡಾರೆಡ್ಡಿ

ಕಾಲ : ೧೯ನೆಯ ಶತಮಾನ

ತೃಟಿತ ತೇದಿಯಿಲ್ಲದ ಈ ಶಾಸನವು ಪಲ್ಲವ (ನೊಳಂಬ) ವಂಶದ ಮಜಾಪರಸನ ಕಾಲದ್ದಾಗಿದ್ದು, ಅವನು ಬಳ್ಳಾರೆ-೩೦ ಪೊಲೆಯರಿಗೆ ತೆರಿಗೆ ಬಿಟ್ಟದ್ದನ್ನು ತಿಳಿಸುತ್ತದೆ. ಇದು ೧೦ನೆಯ ಶತಮಾನದ ಉತ್ತರಾರ್ಧಕ್ಕೆ ಸೇರುತ್ತದೆ.

ಶಾಸನದ ಸಂಖ್ಯೆ : ೭

ಗ್ರಾಮ : ಕೋಳೂರು

ಸ್ಥಳ : ಗಂಗಾಧರಸ್ವಾಮಿ ದೇವಾಲಯ

ಲಿಪಿ ಮತ್ತು ಭಾಷೆ : ಕನ್ನಡ

ವರದಿ/ಪ್ರಕಟಣೆ : TRBD, P. 148

ಕಾಲ : ೧೨ನೆಯ ಶತಮಾನ

೧೨ನೆಯ ಶತಮಾನದ ಶಾಸನ ಬೊಲ್ಲೋಜನ ಕಂಬದ ಉಲ್ಲೇಖವಿದೆ.

ಶಾಸನದ ಸಂಖ್ಯೆ : ೮

ಗ್ರಾಮ : ಕೋಳೂರು

ಸ್ಥಳ : ಗಂಗಾಧರಸ್ವಾಮಿ ದೇವಾಲಯದ ಇನ್ನೊಂದು ಕಂಬ

ಲಿಪಿ ಮತ್ತು ಭಾಷೆ : ಕನ್ನಡ

ವರದಿ/ಪ್ರಕಟಣೆ : TRBD, P. 148

ಕಾಲ : ೧೨ನೆಯ ಶತಮಾನ

ಈ ಶಾಸನವೂ ಮದುವಣಿಗೆ ಕ್ಷೋಮನ ಕಂಬದ ಉಲ್ಲೇಖವಿದೆ.

# ದೇವಾಲಯಗಳ ವಾಸ್ತುಶಿಲ್ಪ

## ೪.೧. ಪೀಠಿಕೆ

ದೇವಾಲಯ ಎಂದರೆ ಇದು ದೇವರ ಆಲಯ. ಆಲಯ ಎಂದರೆ ಕಟ್ಟಡ ಎಂದರ್ಥ. ದೇವರು ಇರುವ ಸ್ಥಾನ ಧಾರ್ಮಿಕ ಶ್ರದ್ಧೆಯ ಪ್ರತೀಕ. (ರಾಮಚಂದ್ರರಾವ್.ಎಸ್. ೧೯೯೪, ಪುಟ-೧) ನಾಡಿನ ನಾಡಿಯನ್ನು ಹಿಡಿದು ನಡೆಸುತ್ತಿದ್ದ ಸಾಂಸ್ಕೃತಿಕ ಕೇಂದ್ರ ಇದು. ದೇವಾಲಯಗಳು ಜನರ ಭಕ್ತಿ ಮತ್ತು ನಿಷ್ಠೆಗಳ ಪ್ರತೀಕ. (ಚಿದಾನಂದಮೂರ್ತಿ ಎಂ., ೧೯೭೯, ಪುಟ-೧೭೫-೭೬) ಪ್ರತಿಮೆಗಳ ಕಲ್ಪನೆ ಹುಟ್ಟಿದಾಗ ಪ್ರತಿಮೆಗೆ ರಕ್ಷಣೆ ನೀಡಿದ ಆಲಯ ಇದು. (ಗೋಪಾಲರಾವ್ ಎಚ್.ಎಸ್., ೧೯೯೩, ಪುಟ-೨೯) ದೇವಾಲಯದ 'ವಾಸ್ತುಕೃತಿ' ಅಥವಾ 'ಆರ್ಕಿಟೆಕ್ಚರ್' ಎಂಬ ಶಬ್ಧ ತಾಂತ್ರಿಕತೆಯ ದೃಷ್ಟಿಯಲ್ಲಿ ಗಾತ್ರದ ದೃಷ್ಟಿಯಿಂದ ಸಣ್ಣದು ಇರಬಹುದು ದೊಡ್ಡದು ಇರಬಹುದು. ಕಲ್ಲಿನಿಂದ ಮರಮುಟ್ಟಿನಿಂದ ನಿರ್ಮಿತಿಯೂ ಆಗಿರಬಹುದು. ಒಟ್ಟಾರೆ ಇದು ವಾಸ್ತುಕೃತಿ. (ಶಿವರಾಮ ಕಾರಂತ, ೧೯೭೫, ಪುಟ-೨೯) ವಾಸ್ತು ರಚನೆಯಲ್ಲಿ ಅಂದು ಇಂದು ಉಳಿದಿರುವುದು ಗುಡಿಗೋಪುರಗಳೇ. ಒಟ್ಟಾರೆ ಇದೊಂದು ಸಾಂಸ್ಕೃತಿಕ ಸಂಪತ್ತು. ವಾಸ್ತು ಗ್ರಂಥಗಳಲ್ಲಿ ದೇವಾಲಯದ ರಚನೆಯೇ ವಾಸ್ತುಶಾಸ್ತ್ರವೆನಿಸಿದೆ. ಇದೇ ವಾಸ್ತು ವಿದ್ಯೆ (ಪ್ರಭಾಕರ. ಎಂ.ಎಸ್., ೨೦೦೦, ಪುಟ-೩)

**ದೇವಾಲಯ ಒಂದು ಸಾಮಾಜಿಕ ಮತ್ತು ಧಾರ್ಮಿಕ ಸಂಸ್ಥೆಯಾಗಿ:**

ದೇವಾಲಯ ಇದು ದೇವರ ಆಲಯ ಅಂದರೆ ಮೂಲತಃ ಇದು ಪೂಜಾಗೃಹವಾದರೂ

ಹಲವಾರು ರೀತಿಯ ಪೂಜೆ, ಪುನಸ್ಕಾರಗಳು, ಹಬ್ಬಗಳು, ಜಾತ್ರೆಗಳು, ಸಮಾಜದ ಜನಸಾಮಾನ್ಯರ ಮೇಲೆ ಪ್ರಭಾವವನ್ನು ಬೀರಿವೆ. ದೇವಾಲಯಗಳು ಜನರ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಬಹಳ ಮಹತ್ವದ ಪಾತ್ರ ವಹಿಸಿವೆ. **(ಮಹಾಲಿಂಗಮ್ ಟಿ.ವಿ., ೧೯೬೫, ಪುಟ-೩೭೨)** ಹಿಂದಿನ ದಿನಗಳಲ್ಲಿ ದಾನ ನೀಡುವುದು ಬದುಕಿನ ಭಾಗವಾಗಿತ್ತು. ಸಮಾಜದಲ್ಲಿ ದಾನಕ್ಕೆ ಮೊದಲಿನಿಂದಲೂ ವಿಶೇಷವಾದ ಪ್ರಾಧಾನ್ಯತೆ ಇದೆ. ಅನ್ನದಾನ, ವಿದ್ಯಾದಾನ, ಭೂದಾನ, ವಸ್ತ್ರದಾನ, ಉದಕದಾನ, ಗೋದಾನ ಇತ್ಯಾದಿ ದಾನಗಳು ಇಲ್ಲಿ ಬಹಳ ಪ್ರಮುಖವಾದವು. ಈಗಲೂ ಕೂಡ ಹಲವಾರು ದೇವಾಲಯಗಳು, ಮಠಗಳು, ಉದಾಹರಣೆಗೆ ಧರ್ಮಸ್ಥಳ ಮಂಜುನಾಥ ದೇವಾಲಯ, ಸುತ್ತೂರು ಮಠ, ಸಿದ್ಧಗಂಗಾಮಠ, ಶೃಂಗೇರಿಯ ಶಾರದಾಂಬ ದೇವಾಲಯಗಳು ಇಂತಹ ಸಮಾಜಕಾರ್ಯಗಳನ್ನು ಈಗಲೂ ಮಾಡುತ್ತಲೇ ಇವೆ.

ಪ್ರಾರಂಭದ ಹಂತದಲ್ಲಿ ನಿರ್ಮಿಸಿದ ದೇವಾಲಯಗಳು ಈಗ ಉಳಿದಿಲ್ಲವಾದರೂ ಅಂದು ರಾಜರು ಅಥವಾ ಮಾಂಡಲಿಕ ಅರಸರುಗಳು ಬಿಟ್ಟ ದಾನದ ವಿಷಯಗಳನ್ನು ಶಾಸನಗಳು ತಿಳಿಸುತ್ತವೆ. ದೇವಾಲಯಗಳು ಜನರ ಭಕ್ತಿ ಮತ್ತು ನಿಷ್ಠೆಯ ಪ್ರತೀಕಗಳು. ಕೆಲವೊಮ್ಮೆ ವ್ಯಕ್ತಿಯ ಹೆಸರನ್ನು ಉದಾಹರಣೆಗೆ 'ಈಶ್ವರ' ಎಂಬ ಪದ 'ಭಟ್ಟಾರಕ' ಎಂಬ ಪದ ಸೇರಿಸಿ ದೇವರನ್ನು ಪ್ರತಿಷ್ಠಾಪಿಸಿದ ಸಂಗಾಯೂ ಶಾಸನದಲ್ಲಿದೆ. **(K.I. Vol-1, P-47)** ವ್ಯಕ್ತಿಯ ಹೆಸರಿನಲ್ಲಿ ಕಟ್ಟಿಸಿದ ದೇವಾಲಯ ಉಳಿದರೂ ದೇವತೆಗಳ ಹೆಸರು ಮಾತ್ರ ಮಾರ್ಪಾಟದವು **(ಚಿದಾನಂದಮೂರ್ತಿ.ಎಂ. ೧೯೭೯, ಪುಟ-೧೭)** ಒಬ್ಬ ವ್ಯಕ್ತಿ ದೇವಾಲಯವೊಂದನ್ನು ನಿರ್ಮಿಸಬೇಕೆಂದು ಬಯಕೆ ಮಾಡಿ ದೇವಾಲಯವೊಂದನ್ನು ಕಟ್ಟಿಸಿದರೆ ಸಾಲದು. ಅದರ ಪೂಜೆ ಪುನಸ್ಕಾರಗಳು ನಡೆಯುತ್ತಾ ಉರ್ಜಿತವಾಗಬೇಕಾಗುತ್ತದೆ. ಆದಕಾರಣ ದೇವಾಲಯವನ್ನು ಕಟ್ಟಿಸಿದ ವ್ಯಕ್ತಿಯೇ ಸಮೃದ್ಧವಾಗಿ ದಾನ ಬಿಡುತ್ತಿದ್ದನು. ಒಂದು ದೇವಾಲಯ ನಿರ್ಮಾಣವಾದ ಮೇಲೆ ಅಲ್ಲಿ ಹತ್ತಾರು ಜನರು ಸೇರಿ ಹತ್ತಾರು ಗ್ರಾಮಗಳನ್ನು ದತ್ತಿ ಬಿಡುತ್ತಿದ್ದರು. ದೇವಾಲಯದ ಈ ಆಸ್ತಿಯೇ ದೇವಭೋಗ ಇಂತಹ ದಾನವನ್ನು ಬಿಡುವಾಗ ದಾನದ ಉದ್ದೇಶವು ಶಾಸನಗಳಲ್ಲಿ ಬರೆಯಲ್ಪಡುತ್ತಿತ್ತು. **(E.C. 9, No.1, P-60)** ಉದಾಹರಣೆಗಾಗಿ ಧೂಪ-ದೀಪ, ಗಂಧ-ನೈವೇದ್ಯ, ಗೀತ, ನೃತ್ಯೋಪಹಾರ, ಖಂಡಸ್ಪಟಿತ ಜೀರ್ಣೋದ್ಧಾರಾದಿಯತೇನಾಂ ವಿದ್ಯಾರ್ಥಿನಾ, ಚಾಸತ್ರ ನಿಮಿತ್ತಂ **(K.I. Vol-1, P-85)** ಎಂದು ಶಾಸನಗಳು ದಾಖಲಿಸುತ್ತವೆ.

ದೇವಾಲಯಗಳು ವಿದ್ಯಾ ಕೇಂದ್ರಗಳು ಹೌದು. ಮೊದಮೊದಲು ಮಠಗಳೇ ವಿದ್ಯಾ ಕೇಂದ್ರಗಳಾಗಿದ್ದವು. ವಿದ್ಯೆಯನ್ನು ಕಲಿಯಲು ಪ್ರಾರಂಭ ಹಂತದಲ್ಲಿ ಅಗ್ರಹಾರ, ಬ್ರಹ್ಮಪುರಿ,

ಘಟಿಕಾ ಸ್ಥಾನಗಳು ಹೆಚ್ಚು ಮಹತ್ವ ಪಡೆದಿವೆ. ದೇವಾಲಯಗಳು ಬೆಳೆಯುತ್ತಾ ಮಠದ ಜೊತೆಗೆ ಸೇರಿ ವಿದ್ಯಾದಾನಕ್ಕೆ ಆದ್ಯತೆ ನೀಡತೊಡಗಿತು. ಈ ದಿಸೆಯಲ್ಲಿ ಕರ್ನಾಟಕದ ಪ್ರಮುಖ ವಿದ್ಯಾ ಕೇಂದ್ರಗಳಾದ ಬಳ್ಳಿಗಾವಿ ಬಳ್ಳಾರಿ ಜಿಲ್ಲೆಯ ಸಾಲೋಟಗಿ ಮತ್ತು ನಾಗವಿ ಪ್ರಮುಖ ಕೇಂದ್ರಗಳಾಗಿದ್ದವು ಎಂಬುದನ್ನು ಇಲ್ಲಿ ಉದಾಹರಿಸಬಹುದು.

ದೇವಾಲಯಗಳು ನ್ಯಾಯಸ್ಥಾನವೂ ಹೌದು. ಏಕೆಂದರೆ ದೇವರ ಹೆಸರಿನಲ್ಲಿ ದೇವರ ಎದುರಿನಲ್ಲಿ ನಿಂತು ಮಾತನ್ನು ನುಡಿದರೆ ಅದನ್ನು ಪರಿಪಾಲಿಸಬೇಕಾಗುತ್ತದೆ. ಇದಕ್ಕೊಂದು ನಿರ್ಬಂಧವಿರುತ್ತದೆ ಎಂಬುದು ಮನಸ್ಸಿನಲ್ಲಿ ಬೇರೂರಿರುವ ಭಾವನೆ. ಹೀಗಾಗಿ ದೇವಾಲಯಗಳು ನ್ಯಾಯವಾಗಿ ಒಂದಲ್ಲ ಒಂದು ರೀತಿಯಿಂದ ಮಹತ್ವ ಪಡೆದಿವೆ. ಇದಕ್ಕೆ ಪ್ರಮುಖ ಉದಾಹರಣೆ ಕುರುಗೋಡಿನ ದೊಡ್ಡಬಸವೇಶ್ವರ ದೇವಾಲಯ.

ಹೀಗೆ ಕುರುಗೋಡು ಪರಿಸರದ ದೇವಾಲಯಗಳು ನ್ಯಾಯವಾಗಿ ಒಂದಲ್ಲ ಒಂದು ರೀತಿಯಿಂದ ಮಹತ್ವ ಪಡೆದಿವೆ. ಇದಕ್ಕೆ ಪ್ರಮುಖ ಉದಾಹರಣೆ ಕುರುಗೋಡಿನ ದೊಡ್ಡಬಸವೇಶ್ವರ ದೇವಾಲಯ.

**ದೇವಾಲಯಗಳ ವರ್ಗೀಕರಣ:**

ದೇವಾಲಯಗಳ ವರ್ಗೀಕರಣದಲ್ಲಿ ಕರ್ನಾಟಕದ ಪಾತ್ರ ಬಲು ದೊಡ್ಡದು. ದೇವಾಲಯಗಳ ವಾಸ್ತು ಶೈಲಿಗಳಲ್ಲಿ ಪ್ರಮುಖವಾಗಿ ಮೂರು ವಿಧಾನಗಳನ್ನು ಕಾಣುತ್ತೇವೆ. ದ್ರಾವಿಡ, ನಾಗರ ಮತ್ತು ವೇಸರ. ಈ ಮಾತನ್ನು ಕರ್ನಾಟಕದಲ್ಲಿ ದೊರೆತ ಶಾಸನಗಳೂ ಪುಷ್ಟಿಕರಿಸುತ್ತವೆ. **(ರೈಸ್.ಬಿ.ಎಲ್, ೧೯೦೨, ಪುಟ-೧೨೪)** ದ್ರಾವಿಡ ಎಂಬ ಪದ ದಾಕ್ಷಿಣಾತ್ಯ ನಾಗರ ಎಂಬ ಪದ ಔತ್ತರೇಯ ಸಂಪ್ರದಾಯಗಳಿಗೆ ಖಚಿತವಾದ ದಿಕ್ಕನ್ನು ತೋರಿಸುವಂತಿದೆ. ಅಂದರೆ ದಕ್ಷಿಣ ಭಾರತದ ದೇವಾಲಯ ಹೆಚ್ಚಿನ ಮಟ್ಟಿಗೆ ದ್ರಾವಿಡ ಶೈಲಿ, ಉತ್ತರ ಭಾರತದ ದೇವಾಲಯಗಳು ಹೆಚ್ಚಿನ ಮಟ್ಟಿಗೆ ನಾಗರ ಶೈಲಿಯಲ್ಲಿವೆ. "ದಿಕ್ಕಿಗೆ" ಸಂಬಂಧಿಸಿದಂತೆ ಇದಕ್ಕೆ ಅಪವಾದವೂ ಉಂಟು. ಉದಾಹರಣೆಗಾಗಿ ಐಹೊಳೆಯಲ್ಲಿ ದ್ರಾವಿಡ ನಾಗರ ಮತ್ತು ವೇಸರ ಶೈಲಿಯ ಮೂರು ಪ್ರಕಾರದ ದೇವಾಲಯಗಳನ್ನು ಕಾಣಬಹುದು. ಅದಕ್ಕೆ "ಐಹೊಳೆಯನ್ನು ಭಾರತೀಯ ದೇವಾಲಯಗಳ ವಾಸ್ತುಶಿಲ್ಪದ ತೊಟ್ಟಿಲು" ಎಂದೇ ಕರೆಯಲಾಗಿದೆ. ವೇಸರ ಶೈಲಿ ಎಂಬುದು ಉತ್ತರ ಮತ್ತು ದಕ್ಷಿಣ ಭಾರತದ ಮಿಶ್ರಿತ ರಚನೆಯಾಗಿದೆ. ದ್ರಾವಿಡ ಶೈಲಿಯ ಶಿಖರಗಳು ಅಷ್ಟ ಕೋನಾಕೃತಿ ಅಥವಾ ಆರು ಕೋನಾಕೃತಿಯಲ್ಲಿದ್ದರೆ ನಾಗರ ಶೈಲಿ ಚಚ್ಚಾಕೋನ ಅಥವಾ ಆಯತಾ ಕೋನಾಕೃತಿಯಾಗಿದೆ. ವೇಸರ ಶೈಲಿ ಎಂಬುದು ಇವೆರಡರ ಮಿಶ್ರಿತ ಶೈಲಿ ಅಥವಾ ಇದರ ಆಕೃತಿ ವೃತ್ತಾಯತ ಅಥವಾ ಗಜಪ್ರಷ್ಟಾಕೃತಿ.

ವರ್ಗೀಕರಣ ಮಾಡುವಾಗ ತಳವಿನ್ಯಾಸವೇ ಮುಖ್ಯವಾಗಿದ್ದರೂ ಇಲ್ಲಿ ಶಿಖರ ವಿನ್ಯಾಸವೇ ಪ್ರಧಾನ. ದ್ರಾವಿಡ, ನಾಗರ, ವೇಸರ ಶೈಲಿಯ ಹೊರತಾಗಿ ಉಳಿದ ಶೈಲಿಗಳು ಇನ್ನೂ ಕೆಲವು ಹುಟ್ಟಿಕೊಂಡಿವೆ. ಭೂಮಿಜ ಶೈಲಿ, ಈ ಶೈಲಿಯ ದೇವಾಲಯವನ್ನು ಕರ್ನಾಟಕದ ನುಗ್ಗಿಹಳ್ಳಿಯಲ್ಲಿ ಕಾಣಬಹುದು. ಹೀಗೆ ಕೆಲವೊಂದು ಪ್ರದೇಶಗಳಲ್ಲಿ ಪ್ರಾದೇಶಿಕ ಲಕ್ಷಣಗಳನ್ನು ಮೈಗೂಡಿಸಿಕೊಂಡು ದೇವಾಲಯಗಳ ರಚನೆಯಾಯಿತು. ಹೀಗಾಗಿ ದೇವಾಲಯಗಳ ರಚನೆಗಳಲ್ಲಿ ಪ್ರಾದೇಶಿಕ ಪ್ರಭಾವವನ್ನು ಕಾಣಬಹುದು. ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ವಿವಿಧ ದೇವಾಲಯಗಳ ರಚನೆಯಾಯಿತು. ಒಂದೊಂದು ಪ್ರಮುಖ ರಾಜವಂಶದ ದೇವಾಲಯಗಳು ಒಂದೊಂದು ಪ್ರದೇಶದಲ್ಲಿ ಕೇಂದ್ರೀಕೃತವಾಗಿವೆ. ಉದಾಹರಣೆಗೆ ಕದಂಬರ ಕಾಲದ ದೇವಾಲಯಗಳು ಬನವಾಸಿಯಲ್ಲಿ ಹಾಸನದ ಹಲ್ಮಿಡಿಯಲ್ಲಿ, ಬಾದಾಮಿ ಚಲುಕ್ಯರ ದೇವಾಲಯಗಳು, ಐಹೊಳೆ, ಬಾದಾಮಿ, ಪಟ್ಟದಕಲ್ಲು, ರಾಷ್ಟ್ರಕೂಟರ ದೇವಾಲಯಗಳು ಎಲ್ಲೋರ, ಶಿರ್ವಾಳ, ಕುಕನೂರುಗಳಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಗದಗ, ಲಕ್ಕುಂಡಿ, ಕುರುವತ್ತಿ, ಕುರುಗೋಡು, ಓರುವಾಯಿ, ಮೋಕಾ ಮತ್ತು ಕೋಳೂರುಗಳಲ್ಲಿ ಇವೆ. ಹೀಗೆ ಬೇರೆ ಬೇರೆ ಕಾಲದ ದೇವಾಲಯಗಳನ್ನು ಬಿಡಿ ಬಿಡಿಯಾಗಿ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಕಾಣುತ್ತೇವೆ. ದೇವಾಲಯದ ರಚನೆ ಕಾಲದಿಂದ ಕಾಲಕ್ಕೆ ರಚನಾತ್ಮಕವಾಗಿ ನಿರ್ದಿಷ್ಟಗೊಳ್ಳುತ್ತಾ ತನ್ನದೇ ಆದ ಶೈಲಿಯನ್ನು ರೂಢಿಸಿಕೊಂಡಿತು. ಈ ಪ್ರಬೇಧ ಹೀಗೆ ಪ್ರತಿಯೊಂದು ಪ್ರದೇಶದ ದೇವಾಲಯಗಳು ವಾಸ್ತುಶಿಲ್ಪಕ್ಕೆ ವೈಶಿಷ್ಟ್ಯ ಪೂರ್ಣವಾದ ಕೊಡುಗೆಯನ್ನು ನೀಡಿವೆ. (ಕೂ.ಸ.ಅಪರ್ಣ, ೧೯೯೯, ಪುಟ-೧೦) ಈ ಒಂದು ಹಿನ್ನೆಲೆಯಲ್ಲಿ ಪ್ರಸ್ತುತ ಕುರುಗೋಡು ಪರಿಸರದ ದೇವಾಲಯಗಳ ವಾಸ್ತುಶೈಲಿಯ ಪ್ರಸ್ತಾವನೆಯನ್ನು ಇಲ್ಲಿ ನೀಡಲಾಗಿದೆ.

### ೪.೨. ಶೈವ ದೇವಾಲಯಗಳು

ಕುರುಗೋಡು ಪರಿಸರ ಅಂದರೆ ಕುರುಗೋಡು, ಓರುವಾಯಿ, ಕೋಳೂರು ಮತ್ತು ಮೋಕಾಗಳಲ್ಲಿರುವ ವಿವಿಧ ಕಾಲಮಾನದ ಶೈವ ದೇವಾಲಯಗಳ ವಾಸ್ತು ಲಕ್ಷಣಗಳು ಈ ಕೆಳಗಿನಂತಿವೆ.

೧. ಗ್ರಾಮ : ಕುರುಗೋಡು

ಹೆಸರು : ಕಲ್ಲೇಶ್ವರ ದೇವಾಲಯ

ಸ್ಥಳ : ಗ್ರಾಮದ ಒಳಗೆ, ಪ್ರೌಢಶಾಲೆ ಮೈದಾನ.

ಕಾಲ : ಕ್ರಿ.ಶ. ೧೨ನೆಯ ಶತಮಾನ

| | | |
|---|---|---|
| ರಾಜವಂಶ | : | ಕಲ್ಯಾಣ ಚಾಲುಕ್ಯರು |
| ದಿಕ್ಕು | : | ಪೂರ್ವಾಭಿಮುಖ |
| ಸ್ಥಿತಿ | : | ಉತ್ತಮ |
| ಮಾಧ್ಯಮ | : | ಕಣ ಶಿಲೆ |
| ಪ್ರಕಟಣೆ | : | ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ. |

ಕಲ್ಲೇಶ್ವರ ದೇವಾಲಯವು ಗರ್ಭಗೃಹ, ಅಂತರಾಳ, ತೆರದ ಸಭಾಮಂಟಪ ಮತ್ತು ಮುಖಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಎರಡು ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಪ್ರವೇಶ ದ್ವಾರಕ್ಕೆ ಪದ್ಮಗಳು, ಹೂವಿನ ಎಸಳೆಗಳು, ಅರ್ಧಗಂಬಗಳು, ಲಲಾಟಬಿಂಬದಲ್ಲಿ ಗಜಲಕ್ಷ್ಮೀ, ಮೇಲ್ಭಾಗ ಔತ್ತರೇಯ ಮಾದರಿಯ ಶಿಖರ ಪಟ್ಟಿಕೆಗಳು, ಇಕ್ಕೆಲಗಳಲ್ಲಿ ಜಾಲಂಧರಗಳು ಎರಡು ಚೌಕಾಕಾರದ ಕಂಬಗಳು, ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ ಮೂರ್ತಿ ಇದೆ. ಬಾಗಿಲು ದ್ವಾರದಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತು ದ್ವಾರ ಪಾಲಕರ ವಿಗ್ರಹಗಳಿವೆ. ವಿಶಾಲವಾದ ಸಭಾಮಂಟಪದ ಮಧ್ಯ ಚೌಕಾಕಾರದ ನಾಲ್ಕು ಸ್ತಂಭಗಳು ಕೆಳಗೆ, ಮೇಲೆ ಚಚ್ಚೌಕ, ಮಧ್ಯ ಹದಿನಾರು, ಎಂಟು ಭಾಗದ ಪಟ್ಟಿಕೆಗಳು, ವೃತ್ತಾಕಾರದ ಮುಚ್ಚಳ, ಚೌಕಾಕಾರದ ಫಲಕ, ಬೋದಿಗೆಗಳಿಂದ ಕೂಡಿವೆ. ಸಭಾಮಂಟಪದ ಮಧ್ಯ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಅರ್ಧಗಂಬ, ಪಟ್ಟಿಕೆ ಔತ್ತರೇಯ ಶಿಖರ ಪಟ್ಟಿಕೆಗಳಿಂದ ಅಲಂಕರಣಗೊಳಿಸಿದ ಗೂಡುಗಳಲ್ಲಿ ಬಲಭಾಗದಲ್ಲಿ ಗಣೇಶ, ಎಡಭಾಗದಲ್ಲಿ ಸೂರ್ಯ ವಿಗ್ರಹಗಳಿವೆ. ಸಭಾಮಂಟಪದ ಭಿತ್ತಿಯ ಒಳಭಾಗದಲ್ಲಿ ಹಂಸ ಮತ್ತು ಪದ್ಮಗಳನ್ನು ಕೆತ್ತಲಾಗಿದೆ. ಸುತ್ತಲಿರುವ ಅರ್ಧ ಭಿತ್ತಿಯು ರಕ್ಷಾಸನಕ್ಕೆ ಅನುಕೂಲವಾಗಿದೆ. ಈ ಭಿತ್ತಿಗೆ ಹೊಂದಿಕೊಂಡು ಚೌಕಾಕಾರದ ಕಂಬಗಳಿವೆ. ಇದೇ ರೀತಿಯ ಎರಡು ಸ್ತಂಭಗಳನ್ನು ಮುಖಮಂಟಪಕ್ಕೆ ಪ್ರವೇಶದಲ್ಲಿ ಸೋಪಾನಗಳು ಅದರ ಇಕ್ಕೆಲಗಳಲ್ಲಿ ಆನೆಗಳಿವೆ.

ದೇವಾಲಯದ ಹೊರಭಾಗದಲ್ಲಿ ಹೇಳುವುದಾದರೆ ಅಧಿಷ್ಠಾನ, ಉಪಾನ, ಜಗತಿ, ತ್ರಿಪಟ್ಟ, ಕುಮುದ, ಪದ್ಮಭಾಗಗಳಿಂದ ಕೂಡಿದೆ. ಕಕ್ಷಾಸನದ ಹೊರಭಾಗದ ಭಿತ್ತಿಗೆ ಪದ್ಮ, ಆನೆಗಳ ಕೆತ್ತನೆಗಳಿವೆ. ಕಪೋತ ಭಾಗದಲ್ಲಿ ಮುಂಚಾಚಿದ ಪಟ್ಟಿಕೆಗಳಿವೆ. ಗರ್ಭಗೃಹದ ಮೇಲೆ ಅಲಂಕರಣಗೊಂಡ ಶಿಖರವಿದೆ. ಈ ದೇವಾಲಯದ ನಿರ್ಮಾಣಕ್ಕೆ ಕಣಶಿಲೆಯನ್ನು ಬಳಸಲಾಗಿದೆ.

ಈ ದೇವಾಲಯದಲ್ಲಿ ಕ್ರಿ.ಶ. ೧೧೭೬ರ ಕಳಚೂರಿ ದೊರೆ ರಾಯಮುರಾರಿ ಸೋವಿದೇವನ ಕಾಲದ ಶಾಸನವಿದೆ. ಇದರಲ್ಲಿ ಆತನ ಸಾಮಂತ ಸಿಂದವಂಶದ ಮಹಾಮಂಡಲೇಶ್ವರ ರಾಚಮಲ್ಲನು

ಈ ಗ್ರಾಮದ ಮುಮ್ಮರಿದಂಡರಲ್ಲಿ ಒಬ್ಬನಾದ ಕಲ್ಲಿಸೆಟ್ಟಿ ಸ್ಥಾಪಿಸಿದ ಕಲಿದೇವರಿಗೆ ಭೂದಾನ ನೀಡಿದ ಉಲ್ಲೇಖವಿದೆ. (ಕ.ವಿ.ವಿ. ಶಾ.ಸಂ-೧, ಓರುವಾಯಿ, ಶಾ.ಸಂ-೭)

೨. ಗ್ರಾಮ : ಕುರುಗೋಡು

ಹೆಸರು : ಸಂಗಮೇಶ್ವರ ದೇವಾಲಯ

ಸ್ಥಳ : ಗ್ರಾಮದ ಪಶ್ಚಿಮಕ್ಕೆ, ಮುಷ್ಟಗಟ್ಟೆ ರಸ್ತೆ.

ಕಾಲ : ಕ್ರಿ.ಶ. ೧೨ನೆಯ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯರು

ದಿಕ್ಕು : ಪೂರ್ವ

ಸ್ಥಿತಿ : ಮಧ್ಯಮ

ಮಾಧ್ಯಮ : ಕಣಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ.

ಈ ದೇವಾಲಯವು ಗರ್ಭಗೃಹ, ಅಂತರಾಳ, ಪ್ರದಕ್ಷಿಣಪಥ, ತೆರದ ಸಭಾಮಂಟಪ ಮತ್ತು ಮುಖಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಗರ್ಭಗೃಹದ ಪ್ರವೇಶ ದ್ವಾರಕ್ಕೆ ಅರ್ಧಗಂಭಗಳು, ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತ ದ್ವಾರಪಾಲಕರ ವಿಗ್ರಹಗಳು, ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ ಅದರ ಮೇಲ್ಭಾಗದಲ್ಲಿ ಔತ್ತರೇಯ ಮಾದರಿಯ ಶಿಖರ ಪಟ್ಟಿಕೆಗಳಿವೆ. ಗರ್ಭಗೃಹದ ಸುತ್ತಲೂ ತೆರದ ಪ್ರದಕ್ಷಿಣಾ ಪಥವಿದೆ. ಅದರ ಪ್ರವೇಶಕ್ಕೆ ಸೋಪಾನಗಳನ್ನು ಜೋಡಿಸಲಾಗಿದೆ. ಅಂತರಾಳದ ಪ್ರವೇಶದ್ವಾರವೂ ಇದೇ ರೀತಿಯಲ್ಲಿದ್ದು, ಇಕ್ಕೆಲಗಳಲ್ಲಿ ಚೌಕಾಕಾರದ ಎರಡು ಸ್ತಂಭಗಳು ಉದ್ದ ಮತ್ತು ಅಡ್ಡಪಟ್ಟಿಕೆಗಳಿಂದ ಕೂಡಿದೆ.

ಸಭಾಮಂಟಪದಲ್ಲಿ ಮೂವತ್ತಾರು ಸ್ತಂಭಗಳು ಮೂರು ರೀತಿಯಲ್ಲಿವೆ. ಮಧ್ಯದ ನಾಲ್ಕು ಕಪ್ಪು ಶಿಲೆಯ ಸ್ತಂಭಗಳು ಆಕಾರದಲ್ಲಿ ದೊಡ್ಡದಾಗಿದ್ದು, ಚೌಕಾಕಾರದ ಮಧ್ಯ ಎಂಟು ಹದಿನಾರು ಭಾಗದ ಪಟ್ಟಿಕೆಗಳು ವೃತ್ತಾಕಾರದ ಮುಚ್ಚಳ, ಚೌಕಾಕಾರದ ಫಲಕ ಬೋದಿಗೆಗಳಿಂದ ಕೂಡಿವೆ. ಅವುಗಳ ಸುತ್ತಲಿರುವ ಹದಿನಾರು ಸ್ತಂಭಗಳು ಕೆಳಭಾಗ ಅಸಮ ಚೌಕಾಕಾರ, ಮೇಲೆ ವೃತ್ತಾಕಾರವಾಗಿ ವೃತ್ತಾಕಾರದ ಮುಚ್ಚಳ, ಚೌಕಾಕಾರದ ಫಲಕ, ಬೋದಿಗೆಗಳಿಂದ ಕೂಡಿದೆ. ಅವುಗಳ ಸುತ್ತಲಿರುವ ಇಪ್ಪತ್ತು ಭಾಗದ ಪಟ್ಟಿಕೆಗಳು, ಮೇಲ್ಭಾಗ ಚೌಕಾಕಾರದ ಫಲಕ ಬೋದಿಗೆಗಳಿಂದ ಕೂಡಿವೆ. ದೇವಾಲಯದ ಸುತ್ತಲೂ ಅರ್ಧ ಮುಚ್ಚಿದ ಭಿತ್ತಿಗೆ ಹೊಂದಿಕೊಂಡು ಚೌಕಾಕಾರದ ಕಂಬಗಳಿವೆ.

ಭಿತ್ತಿಯ ಮೇಲೆ ಕಕ್ಷಾಸನದ ವ್ಯವಸ್ಥೆ ಇದೆ. ದೇವಾಲಯದ ಅಧಿಷ್ಠಾನದ ಭಾಗ ಮಣ್ಣಲ್ಲಿ ಹೂತು ಹೋಗಿದೆ. ಗರ್ಭಗೃಹದ ಮೇಲೆ ಕದಂಬ, ನಾಗರ ಶಿಖರವಿದೆ. ಈ ದೇವಾಲಯವು ಕಣಶಿಲೆಯಿಂದ ನಿರ್ಮಿಸಲಾಗಿದೆ.

ಸದಾಶಿವ ಮಹಾರಾಯನ ಕಾಲದ ಕ್ರಿ.ಶ. ೧೫೪೩ರ ಶಾಸನ ಕೃಷ್ಣದೇವರಾಯ ಈ ದೇವಾಲಯಕ್ಕೆ ಜನಕುಂಟೆ ಗ್ರಾಮವನ್ನು ದಾನ ಕೊಟ್ಟಿದ್ದನು. ಇದು ನಿಂತು ಹೋಗಲು ಗುಂಡರಾಯನ ಅಳಿಯ ನಿಂಗರಾಯ ಸದಾಶಿವ ಮಹಾರಾಯರಿಗೆ ಪುಣ್ಯವಾಗಬೇಕೆಂದು ಇದನ್ನು ಪುನರ್ ದತ್ತಿ ಬಿಟ್ಟಿದ್ದಲ್ಲದೆ ಗ್ರಾಮದ ತೋಟವನ್ನು ಮಾನ್ಯವಾಗಿ ಮಾಡುತ್ತಾನೆ. **(ಕ.ವಿ.ವಿ.ಶಾ.ಸಂ-೧, ಕುರುಗೋಡು ಶಾ.ಸಂ-೧೭)**

| | | |
|---|---|---|
| ೩. | ಗ್ರಾಮ | : ಕುರುಗೋಡು |
| | ಹೆಸರು | : ಈಶ್ವರ (ತ್ರೈಪುರುಷ) ದೇವಾಲಯ |
| | ಸ್ಥಳ | : ಗ್ರಾಮದ ಪಶ್ಚಿಮಕ್ಕೆ, ಹಳೇಗೋಡೆ |
| | ಕಾಲ | : ಕ್ರಿ.ಶ. ೧೧೭೭ |
| | ರಾಜವಂಶ | : ಕಲ್ಯಾಣ ಚಾಲುಕ್ಯರು |
| | ದಿಕ್ಕು | : ಉತ್ತರ |
| | ಸ್ಥಿತಿ | : ಕನಿಷ್ಠ |
| | ಮಾಧ್ಯಮ | : ಕಪ್ಪುಶಿಲೆ |
| | ಪ್ರಕಟಣೆ | : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ. |

ಎತ್ತರದ ಜಗತಿಯ ಮೇಲೆ ನಿರ್ಮಾಣವಾದ ಈ ದೇವಾಲಯವು ಎರಡು ಗರ್ಭಗೃಹಗಳು ಮಾತ್ರವಿದ್ದು, ಉಳಿದ ಭಾಗ, ಹಾಳಾಗಿದೆ. ದಕ್ಷಿಣ ಭಾಗದ ಗರ್ಭಗೃಹದ ಪ್ರವೇಶ ದ್ವಾರಕ್ಕೆ ಹೂವಿನ ಎಸಳುಗಳು, ಪದ್ಮದಸಾಲು, ನಂದಿಯ ಸಾಲು, ಲಲಾಟಬಿಂಬದಲ್ಲಿ ಗಜಲಕ್ಷ್ಮೀ ಅದರ ಮೇಲೆ ಮುಂಚಾಚಿದ ಪಟ್ಟಿಕೆ, ಔತ್ತರೇಯ ಶಿಖರ ಪಟ್ಟಿಕೆಗಳು ಹಾಗೂ ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತದ್ವಾರ ಪಾಲಕರ ವಿಗ್ರಹಗಳಿವೆ. ಅಂತರಾಳದ ಪ್ರವೇಶದ್ವಾರವೂ ಇದೇ ಮಾದರಿಯಲ್ಲಿದೆ. ಪೂರ್ವ ಭಾಗದ ಗರ್ಭಗೃಹವು ಹಾಳಾದ ಅವಸ್ತೆಯಲ್ಲಿದೆ. ಇದಕ್ಕೆ ತೆರದ ಅಂತರಾಳ, ಇಕ್ಕೆಲಗಳಲ್ಲಿರುವ ಚೌಕಾಕಾರದ ಸ್ತಂಭಗಳು ಉದ್ದ, ಅಡ್ಡ ಪಟ್ಟಿಕೆಗಳಿಂದ ಕೂಡಿವೆ.

ಸಭಾಮಂಟಪ ಸಂಪೂರ್ಣವಾಗಿ ಹಾಳಾಗಿದೆ. ಅದರ ತಳಪಾಯದಲ್ಲಿ ಸ್ತಂಭಗಳು, ಭಿತ್ತಿಯ ಶಿಲೆಗಳು ಹರಡಿವೆ. ದಕ್ಷಿಣದ ಅಂತರಾಳದ ಭಿತ್ತಿಯಲ್ಲಿ ಅರ್ಧಗಂಭಗಳು, ಕೆಳ-ಮೇಲೆ

ಪಟ್ಟಿಕೆಗಳು, ಮೇಲ್ಭಾಗ ಔತ್ತರೇಯ ಶಿಖರ ಪಟ್ಟಿಕೆಗಳಿಂದ ಅಲಂಕೃತಗೊಳಿಸಿದ ಗೂಡ ಇದೆ. ಗರ್ಭಗೃಹದ ಮೇಲೆ ಕದಂಬನಾಗರ ಶಿಖರವಿದೆ.

ಕುರುಗೋಡುನ ಬಸವೇಶ್ವರ ದೇವಾಲಯದಲ್ಲಿ ಕ್ರಿಶ. ೧೧೧೭ರ ಕಲಚೂರಿ ಸಂಕಮದೇವನ ಶಿಲಾಶಾಸನವಿದೆ. ಅದರಲ್ಲಿ ಆತನ ಮಹಾಮಂಡಲೇಶ್ವರ ಸಿಂದ ವಂಶದ ರಾಚಮಲ್ಲ ಈ ಪ್ರದೇಶವನ್ನು ನೋಡಿಕೊಳ್ಳುತ್ತಿದ್ದನು. ಇಲ್ಲಿಯ ಮುಮ್ಮರಿ ದಂಡಗಳು ತ್ರಿಕೂಟಾಚಲಯವನ್ನು ಕಟ್ಟಿಸಿ ಗೌರೇಶ್ವರನನ್ನು ಪ್ರತಿಷ್ಠಾಪಿಸುತ್ತಾರೆ. ಮಾರಾಟವಾಗುವ ಮತ್ತು ಕೊಳ್ಳುವ ವಸ್ತುಗಳ ಮೇಲಿನ ಸುಂಕ ಮತ್ತು ಭೂಮಿಯನ್ನು ಈ ದೇವರಿಗೆ ದಾನ ನೀಡುತ್ತಾರೆ. ಶಾಸನೋಲ್ಲೇಖಿತ ತ್ರಿಕೂಟಾಲಯ ಬಹುಶಃ ಇದೇ ದೇವಾಲಯವಿರಬಹುದು.

೪. ಗ್ರಾಮ : ಕುರುಗೋಡು

ಹೆಸರು : ಈಶ್ವರ ದೇವಾಲಯ

ಸ್ಥಳ : ಗ್ರಾಮದ ಪಶ್ಚಿಮಕ್ಕೆ, ಹಳೇಗೋಡೆ.

ಕಾಲ : ಕ್ರಿಶ. ೧೨ನೆಯ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯರು

ದಿಕ್ಕು : ಉತ್ತರ

ಸ್ಥಿತಿ : ಮಧ್ಯಮ

ಮಾಧ್ಯಮ : ಕಪ್ಪುಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ

ಈಶ್ವರ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖ ಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಗರ್ಭಗೃಹದ ಪ್ರವೇಶಕ್ಕೆ ಪದ್ಮಗಳ ಸಾಲು, ಅರ್ಧಗಂಬಗಳು, ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ, ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತ ದ್ವಾರಪಾಲಕರ ಮೂರ್ತಿಶಿಲ್ಪಗಳಿವೆ. ಸಭಾಮಂಟಪದಲ್ಲಿ ನಂದಿಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. ಅಂತರಾಳದ ಪ್ರವೇಶದ್ವಾರವೂ ಗರ್ಭಗೃಹದಂತಿದ್ದು, ಲಲಾಟಬಿಂಬದ ಮೇಲ್ಭಾಗದ ಪಟ್ಟಿಕೆಯಲ್ಲಿ ಔತ್ತರೇಯ ಮಾದರಿಯ ಶಿಖರ ಪಟ್ಟಿಕೆಗಳು ಅವುಗಳ ಮಧ್ಯ ಸಿಂಹಗಳಿಂದ ಅಲಂಕೃತವಾಗಿವೆ. ಪ್ರವೇಶದ್ವಾರದ ಇಕ್ಕೆಲಗಳಲ್ಲಿ ಚೌಕಾಕಾರದ ಎರಡು ಸ್ತಂಭಗಳು ಉದ್ದ ಅಡ್ಡ ಪಟ್ಟಿಕೆಗಳಿಂದ ಕೂಡಿವೆ. ತೆರದ ಸಭಾಮಂಟಪದ ಭಿತ್ತಿಯಲ್ಲಿ ನಾಲ್ಕು ಗೂಡುಗಳಿವೆ. ಅವುಗಳನ್ನು ಅರ್ಧಗಂಬಗಳು ಮುಂಚಾಚಿದ ಪಟ್ಟಿಕೆಗಳಿಂದ ಅಲಂಕರಿಸಲಾಗಿದೆ. ಮಧ್ಯದಲ್ಲಿ

ನಾಲ್ಕು ಸ್ತಂಭಗಳು ಕೆಳಗೆ, ಮೇಲೆ ಚೌಕಾಕಾರದ ಮಧ್ಯ ಹದಿನಾರು-ಎಂಟು ಭಾಗದ ಪಟ್ಟಿಕೆ, ವೃತ್ತಾಕಾರದ ಮುಚ್ಚಳ, ಚೌಕಾಕಾರದ ಫಲಕ ಬೋದಿಗೆಗಳಿಂದ ಕೂಡಿವೆ. ಸುತ್ತಲೂ ಅರ್ಧ ಮುಚ್ಚಿದ ಭಿತ್ತಿಗೆ ಹೊಂದಿಕೊಂಡು ಪ್ರವೇಶಕ್ಕೆ ಸೋಪಾನಗಳು ಅದರ ಇಕ್ಕೆಲಗಳಲ್ಲಿ ಸುರಳಿಯಾಕಾರದ ಸುತ್ತಿಕೊಂಡ ಕೆತ್ತನೆ ಬಂಡೆಗಳನ್ನು ಜೋಡಿಸಲಾಗಿದೆ.

ಈಶ್ವರ ದೇವಾಲಯದ ಅಧಿಷ್ಠಾನ ಭಾಗ ಮಣ್ಣಲ್ಲಿ ಹೂತು ಹೋಗಿದೆ. ಗರ್ಭಗೃಹದ ಮೇಲೆ ಕದಂಬ ನಾಗರ ಶಿಖರವಿದೆ.

೫. ಗ್ರಾಮ : ಕುರುಗೋಡು

ಹೆಸರು : ಬಸವೇಶ್ವರ ದೇವಾಲಯ

ಸ್ಥಳ : ಗ್ರಾಮದ ಪಶ್ಚಿಮಕ್ಕೆ, ಬಸ್ ನಿಲ್ದಾಣದ ಹತ್ತಿರ

ಕಾಲ : ಕ್ರಿ.ಶ. ೧೧೭೭

ರಾಜವಂಶ : ಕಲ್ಯಾಣ ಚಾಲುಕ್ಯರು

ದಿಕ್ಕು : ಉತ್ತರ

ಸ್ಥಿತಿ : ಮಧ್ಯಮ

ಮಾಧ್ಯಮ : ಕಣಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ

ಈ ದೇವಾಲಯದ ಗರ್ಭಗೃಹದಲ್ಲಿ ಸುಮಾರು ಐದು ಅಡಿ ಎತ್ತರದ ನಂದಿ, ಬೃಹತ್ ಬಂಡೆಯಲ್ಲಿ ನಿರ್ಮಾಣವಾಗಿದೆ. ಗರ್ಭಗೃಹದ ಪ್ರವೇಶದ್ವಾರಕ್ಕೆ ಅರ್ಧಗಂಭಗಳು, ಮೇಲ್ಭಾಗ ಮುಂಚಾಚಿದ ಪಟ್ಟಿಕೆಗಳು, ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತ ದ್ವಾರಪಾಲಕರಿದ್ದಾರೆ. ಮುಖಮಂಟಪದಲ್ಲಿ ಒಂದೇ ಸಾಲಿನಲ್ಲಿ ನಾಲ್ಕು ಸ್ತಂಭಗಳಿವೆ. ಅವು ಕೆಳ ಮತ್ತು ಮೇಲೆ ಚೌಕಾಕಾರ, ಮಧ್ಯೆ ಹದಿನಾರು ಭಾಗದ ಪಟ್ಟಿಕೆ, ಮೇಲ್ಭಾಗ ಚೌಕಾಕಾರದ ಫಲಕ, ಬೋದಿಗೆಗಳಿಂದ ಕೂಡಿವೆ.

ದೇವಾಲಯದ ಅಧಿಷ್ಠಾನದ ಭಾಗ ಮಣ್ಣಲ್ಲಿ ಹೂತಿದ್ದು, ತ್ರಿಪಟ್ಟ, ಕುಮುದ, ಪದ್ಮ ಭಾಗ ಕಾಣಿಸುತ್ತದೆ. ಭಿತ್ತಿಯ ಮೇಲೆ ಅರ್ಧಗಂಭ ಮತ್ತು ಪಟ್ಟಿಕೆಗಳಿಂದ ಅಲಂಕರಿಸಲಾಗಿದೆ. ಈ ದೇವಾಲಯವು ಕಣಶಿಲೆಯಿಂದ ನಿರ್ಮಾಣವಾಗಿದೆ.

೬. ಗ್ರಾಮ : ಕುರುಗೋಡು

ಹೆಸರು : ಮಲ್ಲಿಕಾರ್ಜುನ ದೇವಾಲಯ

ಸ್ಥಳ : ಗ್ರಾಮದ ಪಶ್ಚಿಮಕ್ಕೆ, ಕಲ್ಲುಗುಡೇಶ್ವರ ದೇವಾಲಯದ ಹತ್ತಿರ.

ಕಾಲ : ಕ್ರಿ.ಶ. ೧೨ನೆಯ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯರು

ದಿಕ್ಕು : ದಕ್ಷಿಣ

ಸ್ಥಿತಿ : ಕನಿಷ್ಠ

ಮಾಧ್ಯಮ : ಕಣಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ.

ಮಲ್ಲಿಕಾರ್ಜುನ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಎರಡು ಅಡಿ ಎತ್ತರದ ಈಶ್ವರ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಪ್ರವೇಶ ದ್ವಾರವನ್ನು ಪದ್ಮಗಳು, ಹೂವಿನ ಎಸಳುಗಳು, ಅರ್ಧಗಂಭಗಳು, ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ, ಅದರ ಮೇಲೆ ಮುಂಚಾಚಿದ ಪಟ್ಟಿಕೆ ಮತ್ತು ಔತ್ತರೇಯ ಶಿಖರ ಪಟ್ಟಿಕೆಗಳು, ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತ ದ್ವಾರಪಾಲಕರ ಮೂರ್ತಿಗಳಿವೆ. ಇದೇ ರೀತಿಯಾಗಿರುವ ಅಂತರಾಳದ ಪ್ರವೇಶ ದ್ವಾರಕ್ಕೆ ಇಕ್ಕೆಲಗಳಲ್ಲಿ ದ್ವಾರಪಾಲಕರ ಬದಲಾಗಿ ಚಾಮರಧಾರೆಯರಿದ್ದಾರೆ. ಸಭಾಮಂಟಪದ ಮಧ್ಯ ನಾಲ್ಕು ಚೌಕಾಕಾರದ ಕಂಬಗಳು ಕೆಳಗೆ, ಮೇಲೆ ಚೌಕ, ಮಧ್ಯ ಹದಿನಾರು–ಎಂಟು ಭಾಗದ ಪಟ್ಟಿಕೆಗಳು ಮೇಲೆ ಚೌಕಾಕಾರದ ಫಲಕ, ಬೋದಿಗೆಗಳಿಂದ ಕೂಡಿವೆ. ಸುತ್ತಲಿರುವ ಹತ್ತು ಸ್ತಂಭಗಳು, ಆರು ಸ್ತಂಭಗಳು ಅಲಂಕರಣೆಯಿಂದ ಕೂಡಿದ್ದು, ಉಳಿದ ನಾಲ್ಕು ಸ್ತಂಭಗಳು ಯಾವುದೇ ಕೆತ್ತನೆಗಳಿಲ್ಲದೆ ಚೌಕಾಕಾರದಲ್ಲಿವೆ.

ದೇವಸ್ಥಾನದ ಹೊರಭಾಗದ ಬಗ್ಗೆ ಹೇಳುವಾಗ ಅಧಿಷ್ಠಾನದಲ್ಲಿ ಉಪಾನ, ಜಗತಿ, ತ್ರಿಪಟ್ಟ, ಕುಮುದ ಪದ್ಮ ಭಾಗಗಳು ಎದ್ದುಕಾಣುತ್ತವೆ. ಗರ್ಭಗೃಹದ ಮೇಲೆ ಕದಂಬನಾಗರ ಶಿಖರವಿದೆ. ದೇವಾಲಯದ ನಿರ್ಮಾಣಕ್ಕೆ ಕಣಶಿಲೆಯನ್ನು ಬಳಸಿಕೊಳ್ಳಲಾಗಿದೆ.

೭. ಗ್ರಾಮ : ಕುರುಗೋಡು

ಹೆಸರು : ರಾಚಮಲ್ಲ ದೇವಾಲಯ

ಸ್ಥಳ : ಗ್ರಾಮದ ದಕ್ಷಿಣಕ್ಕೆ, ಮುಷ್ಟಗಟ್ಟೆ ರಸ್ತೆಯ ಕಣಿವೆ.

ಕಾಲ : ಕ್ರಿ.ಶ. ೧೨ನೆಯ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯರು

ದಿಕ್ಕು : ಪೂರ್ವ

ಸ್ಥಿತಿ : ಮಧ್ಯಮ

ಮಾಧ್ಯಮ : ಕಪ್ಪುಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ

ಈ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪಗಳಿಂದ ಕೂಡಿದೆ. ಗರ್ಭಗೃಹದ ಪ್ರವೇಶ ದ್ವಾರಕ್ಕೆ ಪದ್ಮಗಳು ಹೂವಿನ ಎಸಳುಗಳು, ಅರ್ಧಗಂಭಗಳು, ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ ಮೇಲ್ಭಾಗ ಔತ್ತರೇಯ ಶಿಖರ ಪಟ್ಟಿಕೆಗಳು, ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತ ದ್ವಾರಪಾಲಕರ ವಿಗ್ರಹಗಳಿವೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಅಂತರಾಳದ ಪ್ರವೇಶದ್ವಾರವು ಗರ್ಭಗೃಹದ ಪ್ರವೇಶದಂತಿದ್ದು, ಔತ್ತರೇಯ ಶಿಖರ ಪಟ್ಟಿಕೆಗಳ ಮದ್ಯ ಸಿಂಹಗಳು ಇಕ್ಕೆಲಗಳಲ್ಲಿ ಜಾಲಂಧರಗಳು ಮತ್ತು ಚೌಕಾಕಾರದ ಸ್ತಂಭಗಳು ದ್ವಾರಪಾಲಕರ ಬದಲಾಗಿ ಚಾಮರದಾರೆಯರ ಶಿಲ್ಪಗಳಿವೆ. ವಿಶಾಲವಾದ ಸಭಾಮಂಟಪದ ಮದ್ಯ ಚೌಕಾಕಾರದ ನಾಲ್ಕು ಸ್ತಂಭಗಳು, ಕೆಳಗೆ ಮೇಲೆ ಚೌಕ ಮದ್ಯ ಹದಿನಾರು-ಎಂಟು ಭಾಗದ ಪಟ್ಟಿಕೆಗಳಿವೆ. ಮೇಲ್ಭಾಗ ವೃತ್ತಾಕಾರದ ಮುಚ್ಚಳ, ಚೌಕಾಕಾರದ ಫಲಕ ಬೋದಿಗೆಗಳಿಂದ ಕೂಡಿದೆ. ಸಭಾಮಂಟಪದ ಸುತ್ತಲಿರುವ ಅರ್ಧಗೋಡೆ ಕಕ್ಷಾಸನಕ್ಕೆ ಅನುಕೂಲವಾಗಿದೆ. ಅದಕ್ಕೆ ಹೊಂದಿಕೊಂಡು ಸುತ್ತಲೂ ಚೌಕಾಕಾರದ ಸ್ತಂಭಗಳಿವೆ. ಉತ್ತರ ಭಾಗದಲ್ಲಿ ಇದೇ ರೀತಿಯ ಎರಡು ಸ್ತಂಭಗಳನ್ನು ನಿಲ್ಲಿಸಿ ಮುಖಮಂಟಪವನ್ನು ನಿರ್ಮಿಸಲಾಗಿದೆ. ವಿಮಾನಕ್ಕೆ ಹೊಂದಿಕೊಂಡು ಸುತ್ತಲೂ ಮಂಜೂರು ಇದೆ. ಈ ದೇವಾಲಯದ ಅಧಿಷ್ಠಾನ ಭಾಗ ಮಣ್ಣಲ್ಲಿ ಹೂತು ಹೋಗಿದ್ದರಿಂದ ಸ್ಪಷ್ಟವಾಗಿ ಕಾಣುವುದಿಲ್ಲ. ಗರ್ಭಗೃಹದ ಮೇಲೆ ಕದಂಬನಾಗರ ಶಿಖರವಿದೆ.

ಈ ಗ್ರಾಮದ ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದ ಶಾಸನವು ಸಿಂದ ವಂಶದ ರಾಚಮಲ್ಲನನ್ನು ಹೆಸರಿಸುತ್ತದೆ. ಶಿವನು ಪಾರ್ವತಿಯೊಡನೆ ರಾಚಮಲ್ಲನಿಗೆ ದರ್ಶನವಿತ್ತು. ಅವನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಾನೆ. ಆಗ ಕುರುಗೋಡಿನ ಪಶ್ಚಿಮಕ್ಕೆ ಲಿಂಗ ರೂಪದಲ್ಲಿ ಉದ್ಭವಿಸಿದನೆಂದು ಅದಕ್ಕೆ ರಾಚಮಲ್ಲೇಶ್ವರ ದೇವರೆಂದು ಕರೆದ ಬಗ್ಗೆ ಶಾಸನ ದಾಖಲಿಸುತ್ತದೆ. (ಕ.ವಿ.ವಿ., ಶಾ.ಸಂ-೧, ಕುರುಗೋಡು, ಶಾ.ಸಂ-೧೮)

೮. ಗ್ರಾಮ : ಕುರುಗೋಡು

ಹೆಸರು : ಈಶ್ವರ ದೇವಾಲಯ

ಸ್ಥಳ : ಗ್ರಾಮದ ದಕ್ಷಿಣಕ್ಕೆ, ಮುಷ್ಟಗಟ್ಟೆ ರಸ್ತೆ

ಕಾಲ : ಕ್ರಿ.ಶ. ೧೨ನೆಯ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯರು

ದಿಕ್ಕು : ಪೂರ್ವ

ಸ್ಥಿತಿ : ಮಧ್ಯಮ

ಮಾಧ್ಯಮ : ಕಣಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ

ಈ ದೇವಾಲಯವು ಗರ್ಭಗೃಹ, ಅಂತರಾಳಗಳಿಂದ ಕೂಡಿದ್ದು, ಇದರ ಸಭಾಮಂಟಪ ಸಂಪೂರ್ಣವಾಗಿ ಹಾಳಾಗಿದೆ. ಗರ್ಭಗೃಹದ ಪ್ರವೇಶದ್ವಾರಕ್ಕೆ ಪದ್ಮಗಳು ಹೂವಿನ ಎಸಳುಗಳು, ಅರ್ಧಗಂಭಗಳು, ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ ಮೇಲೆ ಔತ್ತರೇಯ ಶಿಖರ ಪಟ್ಟಿಕೆಗಳು, ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತ ದ್ವಾರಪಾಲಕರ ಮೂರ್ತಿಗಳಿವೆ. ಗರ್ಭ ಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಅಂತರಾಳದ ಪ್ರವೇಶದ್ವಾರವು ಇದೇ ಮಾದರಿಯಲ್ಲಿದ್ದು, ಅದರ ಇಕ್ಕೆಲಗಳಲ್ಲಿ ಜಾಲಂಧರಗಳು ಚೌಕಾಕಾರದ ಸ್ತಂಭ ದ್ವಾರಪಾಲಕರ ಬದಲಾಗಿ ಚಾಮರೆ ದಾರೆಯರ ವಿಗ್ರಹಗಳಿವೆ. ದೇವಾಲಯದ ಮುಂದೆ ಸಭಾಮಂಟಪದ ಅವಶೇಷಗಳು ಹರಡಿವೆ. ಅಧಿಷ್ಠಾನ ಭಾಗವು ಉಪಾನ, ಜಗತಿ, ತ್ರಿಪಟ್ಟ, ಕುಮುದ ಪದ್ಮಗಳಿಂದ ಕೂಡಿದೆ. ಕಪೋತ ಭಾಗದಲ್ಲಿ ಹೊರಚಾಚಿದ ಪಟ್ಟಿಕೆ ಗರ್ಭಗೃಹದ ಮೇಲೆ ಕದಂಬ ಶಿಖರವಿದೆ. ಈ ದೇವಾಲಯದ ನಿರ್ಮಾಣಕ್ಕೆ ಕಣಶಿಲೆಯನ್ನು ಬಳಸಲಾಗಿದೆ.



೯. ಗ್ರಾಮ : ಕುರುಗೋಡು

ಹೆಸರು : ಈಶ್ವರ ದೇವಾಲಯ

ಸ್ಥಳ : ಗ್ರಾಮದ ದಕ್ಷಿಣಕ್ಕೆ, ಮುಷ್ಟಗಟ್ಟೆ ರಸ್ತೆ

ಕಾಲ : ಕ್ರಿ.ಶ. ೧೨ನೆಯ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯರು

ದಿಕ್ಕು : ಪೂರ್ವ

ಸ್ಥಿತಿ : ಕನಿಷ್ಠ

ಮಾಧ್ಯಮ : ಕಣಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ, ಕೆ.ಎಂ.ಸುರೇಶ

ಈ ದೇವಾಲಯವು ಗರ್ಭಗೃಹ, ಅಂತರಾಳಗಳಿಂದ ಕೂಡಿದೆ. ದೇವಾಲಯದ ಉಳಿದ ಭಾಗ ಹಾಳಾಗಿದೆ. ಗರ್ಭಗೃಹದ ಪ್ರವೇಶದ್ವಾರಕ್ಕೆ ಪದ್ಮಗಳು, ಹೂವಿನ ಎಸಳುಗಳು, ಅರ್ಧಗಂಭಗಳು, ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ ಅದರ ಮೇಲ್ಭಾಗದಲ್ಲಿ ಔತ್ತರೇಯ ಮಾದರಿಯ ಶಿಖರ ಪಟ್ಟಿಕೆಗಳಿವೆ. ಇಕ್ಕೆಲಗಳಲ್ಲಿ ತ್ರಿಶೂಲ ಡಮರು ಗದೆ ಹಿಡಿದು ನಿಂತ ದ್ವಾರಪಾಲಕರಿದ್ದಾರೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ತೆರೆದ ಅಂತರಾಳದ ಇಕ್ಕೆಲಗಳಲ್ಲಿ ಉದ್ದ ಅಡ್ಡ ಪಟ್ಟಿಕೆಗಳ ಕೆತ್ತನೆಗಳಿಂದ ಚೌಕಾಕಾರದ ಎರಡು ಸ್ತಂಭಗಳಿವೆ. ಕಣಶಿಲೆಯಿಂದ ನಿರ್ಮಿಸಿದ ಈ ದೇವಾಲಯ ಹಾಳಾದ ಸ್ಥಿತಿಯಲ್ಲಿದೆ.

೧೦. ಗ್ರಾಮ : ಕುರುಗೋಡು

ಹೆಸರು : ಉಜಾಳೇಶ್ವರ ದೇವಾಲಯ

ಸ್ಥಳ : ಗ್ರಾಮದ ಈಶಾನ್ಯಕ್ಕೆ ಹಾಳೂರಲ್ಲಿ

ಕಾಲ : ಕ್ರಿ.ಶ. ೧೨ನೆಯ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯರು

ದಿಕ್ಕು : ಪೂರ್ವ

ಸ್ಥಿತಿ : ಉತ್ತಮ

ಮಾಧ್ಯಮ : ಕಪ್ಪುಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ, ಕೆ.ಎಂ.ಸುರೇಶ

ಕುರುಗೋಡು ಬೆಟ್ಟಗಳ ಸಾಲುಗಳ ಆಚೆಗಿರುವ ಇದು ಉಜಾಳೇಶ್ವರ ದೇವಾಲಯವೆಂದೇ ಪ್ರಸಿದ್ಧವಾಗಿದೆ. ಆದರೆ ಈ ದೇವಾಲಯವು ಕುರುಗೋಡು ಸೀಮೆಯಲ್ಲಿರುವ ಹೂಜೇಹಾಳ ಗ್ರಾಮದಲ್ಲಿತ್ತು. ಈ ಗ್ರಾಮ ಸಂಪೂರ್ಣವಾಗಿ ಪಾಳುಬಿದ್ದು, ದೇವಾಲಯ ಮಾತ್ರ ಉಳಿದಿದೆ. ದೊಡ್ಡಬಸಪ್ಪ ದೇವಾಲಯದಲ್ಲಿರುವ ಕ್ರಿ.ಶ. ೧೫೧೨ರ ಶಾಸನದಲ್ಲಿ "ಕುರುಗೋಡು ಬಸವಣ್ಣ ನಾಯಕರ ಮಕ್ಕಳು, ಮಲ್ಲಪ್ಪ ನಾಯಕರ ಧರ್ಮಪತ್ನಿಯಾದ ಮಲ್ಲಮ್ಮನು ಕುರುಗೋಡು ಸೀಮೆಯ ಈಶಾನ್ಯ ದಿಕ್ಕಿನ, ಹೂಜೇಹಾಳದ ಶಾಂತ ಮಲ್ಲಿಕಾರ್ಜುನ ದೇವರ ದೇವಾಲಯದ ಬಾವಿಯನ್ನು ಜೀರ್ಣೋದ್ಧಾರ ಮಾಡಿದ" ಎಂಬ ಉಲ್ಲೇಖವಿದೆ. ಇದರಿಂದ ಇದು ಶಾಂತ ಮಲ್ಲಿಕಾರ್ಜುನ ದೇವಾಲಯವೆಂದು ಸ್ಪಷ್ಟವಾಗುತ್ತದೆ. ಈ ದೇವಾಲಯದ ಸುತ್ತಮುತ್ತಲಿನ ಪ್ರದೇಶದಲ್ಲಿ ಹಾಳು ಗ್ರಾಮದ ಕುರುಹುಗಳು ಕಂಡುಬರುತ್ತವೆ. (ವಾಸುದೇವ ಬಡಿಗೇರ, ಪೂರ್ವೋಕ್ತ, ಪುಟ-೨೫)

ಎತ್ತರದ ಜಗತಿಯ ಮೇಲೆ ನಿರ್ಮಾಣದ ವಾದ ಈ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪಗಳಿಂದ ಕೂಡಿದೆ. ಗರ್ಭಗೃಹದ ಪ್ರವೇಶದ್ವಾರಕ್ಕೆ ಪದ್ಮಗಳು ಹೂವಿನ ಎಸಲುಗಳು ಅರ್ಧಗಂಭಗಳು ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ ಮೇಲ್ಭಾಗದಲ್ಲಿ ಔತ್ತರೇಯ ಮಾದರಿಯ ಶಿಖರ ಪಟ್ಟಿಕೆಗಳು ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತ ದ್ವಾರಪಾಲಕರ ಮೂರ್ತಿಗಳಿವೆ. ಗರ್ಭಗೃಹದಲ್ಲಿ ಎರಡು ಅಡಿ ಎತ್ತರದ ಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಅಂತರಾಳದ ಪ್ರವೇಶದ್ವಾರವು ಕೂಡ ಇದೇ ಮಾದರಿಯಲ್ಲಿದೆ. ಇಲ್ಲಿ ಶೈವ ದ್ವಾರಪಾಲಕರ ಬದಲಾಗಿ ಚಾಮರದಾರೆಯರ ಶಿಲ್ಪಗಳಿವೆ. ಈ ಶಿಲ್ಪಗಳ ಪೀಠದಲ್ಲಿ ಲೋಕಪುರದ ಜೊಲದೇವಿ ಮತ್ತು ಲೋಕಪುರದ ದೇಚಲದೇವಿ ಎಂಬ ಶಾಸನ ಬರಹಗಳಿವೆ. ಈ ಚಾಮರ ದಾರೆಯರ ಶಿಲ್ಪಗಳನ್ನು ದೇಚಲದೇವಿ ಹಾಗೂ ಜೊಲದೇವಿಯರು ಮಾಡಿಸಿರಬಹುದು.

ವಿಶಾಲವಾದ ಸಭಾಮಂಟಪದ ಮಧ್ಯ ಚೌಕಾಕಾರದ ನಾಲ್ಕು ಸ್ತಂಭಗಳು ಕೆಳಗೆ ಮೇಲೆ ಚೌಕ ಮಧ್ಯ ಹದಿನಾರು–ಎಂಟು ಭಾಗದ ಪಟ್ಟಿಕೆಗಳು ಮೇಲ್ಭಾಗದ ಫಲಕ ಬೋದಿಗೆಗಳಿಂದ ಕೂಡಿವೆ. ಇವುಗಳ ಮಧ್ಯದಲ್ಲಿ ನಂದಿ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಪಶ್ಚಿಮ ಭಾಗದ ಬಿತ್ತಿಗೆ ಎರಡು ಉತ್ತರ ಮತ್ತು ದಕ್ಷಿಣ ಬಿತ್ತಿಗೆ ಒಂದೊಂದಂತೆ ಒಟ್ಟು ನಾಲ್ಕು ದೇವ ಕೋಷ್ಟಕಗಳಿವೆ. ಅವುಗಳನ್ನು ಅರ್ಧಗಂಭಗಳು, ಪದ್ಮಗಳು ಔತ್ತರೇಯ ಶಿಖರ ಪಟ್ಟಿಕೆಗಳಿಂದ ಅಲಂಕರಿಸಲಾಗಿದೆ. ಸಭಾಮಂಟಪದ ಸುತ್ತಲೂ ಕಕ್ಷಾಸನವಿದ್ದು ಅದರ ಮೇಲೆ ಚೌಕಾಕಾರದ ಆರು ಸ್ತಂಭಗಳಿವೆ. ಈ ಕಕ್ಷಾಸನ ಮುಖಮಂಟಪದವರೆಗೂ ಮುಂದುವರೆದಿದೆ. ಸಭಾಮಂಟಪ ಮತ್ತು ಮುಖಮಂಟಪದ ಭಿತ್ತಿಯ ಹೊರಭಾಗವು ಪದ್ಮ ಕಂಠ ಕುಮುದ ಭಾಗಗಳಿಂದ ಕೂಡಿದೆ. ಮೇಲ್ಭಾಗದ ಸುತ್ತಲೂ ಮಂಜೂರು ಅದರ ಮೇಲೆ ಪದ್ಮಗಳ ಸಾಲು ಇದೆ. ಅಂತರಾಳ ಗರ್ಭಗೃಹಗಳ ಅಧಿಷ್ಠಾನದಲ್ಲಿ ಉಪಾನ, ಜಗತಿ, ತ್ರಿಪಟ್ಟ, ಕುಮುದ ಎದ್ದು ಕಾಣುತ್ತದೆ. ಗರ್ಭಗೃಹದ ಮೇಲೆ ಕದಂಬನಾಗರ ಶಿಖರವಿದೆ.

೧೧. ಗ್ರಾಮ : ಕುರುಗೋಡು
ಹೆಸರು : ದೊಡ್ಡಬಸಪ್ಪ ದೇವಾಲಯ
ಸ್ಥಳ : ಗ್ರಾಮದ ಒಳಗೆ, ಬಸ್ ನಿಲ್ದಾಣದ ಹತ್ತಿರ
ಕಾಲ : ಕ್ರಿ.ಶ. ೧೫ನೆಯ ಶತಮಾನ
ರಾಜವಂಶ : ವಿಜಯನಗರ
ದಿಕ್ಕು : ದಕ್ಷಿಣ
ಸ್ಥಿತಿ : ಉತ್ತಮ

ಮಾಧ್ಯಮ : ಕಪ್ಪುಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ.

ವಿಶಾಲವಾದ ಪ್ರಕಾರದಲ್ಲಿ ಎತ್ತರದ ಜಗತಿಯ ಮೇಲೆ ಈ ದೇವಾಲಯವನ್ನು ನಿರ್ಮಿಸಲಾಗಿದೆ. ಗರ್ಭಗೃಹ, ಅಂತರಾಳ, ಸಭಾಮಂಟಪಗಳು ಇದರ ಮುಖ್ಯಭಾಗಗಳು, ಗರ್ಭಗೃಹದ ಪ್ರವೇಶದ್ವಾರವನ್ನು ಪದ್ಮಗಳು ಹೂವಿನ ಎಸಳುಗಳು ಅರ್ಧಗಂಬಗಳು ಹಾಗೂ ಸಿಂಹಗಳ ಸಾಲು, ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ ಅದರ ಮೇಲೆ ಕೀರ್ತಿಮುಖ ಶೈವ ದ್ವಾರಪಾಲಕರ ಶಿಲ್ಪಗಳಿಂದ ಅಲಂಕರಿಸಲಾಗಿದೆ. ಗರ್ಭಗೃಹದಲ್ಲಿ ಏಕಶಿಲಾ ನಂದಿ ಶಿಲ್ಪವಿದೆ. ಅಂತರಾಳದ ಮಧ್ಯ ಎರಡು ಚೌಕಾಕಾರದ ದೊಡ್ಡಸ್ತಂಬಗಳಿವೆ.

ತೆರೆದ ಸಭಾಮಂಟಪದ ಪ್ರವೇಶದಲ್ಲಿ ಸೋಪಾನಗಳು ಅವುಗಳ ಇಕ್ಕೆಲಗಳಲ್ಲಿ ಆನೆಯ ಶಿಲ್ಪಗಳಿವೆ. ಸಭಾಮಂಟಪದ ಮಧ್ಯದ ಅಂಕಣದ ಸುತ್ತಲೂ ಇನ್ನೆರಡು ಚೌಕಾಕಾರದ ಸ್ತಂಭಗಳಿವೆ. ಅವು ಆನೆ ಅವುಗಳಿಂದ ಮೇಲೆದ್ದು ಕಾಲೆತ್ತಿನಿಂತ ಸಿಂಹಗಳು ಮೇಲ್ಭಾಗ ಇಳಿಬಿದ್ದ ಪುಷ್ಪ ಬೋದಿಗೆಗಳಿಂದ ಕೂಡಿದೆ. ಇದೇ ರೀತಿಯ ನಾಲ್ಕು ಸ್ತಂಭಗಳು ಪ್ರವೇಶದ ಮುಂಭಾಗದಲ್ಲಿವೆ. ಸುತ್ತಲೂ ಆಕಾರದಲ್ಲಿ ದೊಡ್ಡದಾದ ಒಟ್ಟು ಹನ್ನೆರಡು ಸ್ತಂಭಗಳಿವೆ. ಈ ದೇವಾಲಯದ ಅಧಿಷ್ಠಾನವು ಉಪಾನ, ಜಗತಿ, ಕಂಠ ಕುಮುದ, ಪದ್ಮ ಭಾಗಗಳಿಂದ ಕೂಡಿದೆ. ಭಿತ್ತಿಯಲ್ಲಿ ಉಬ್ಬುಶಿಲ್ಪಗಳಿವೆ. ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯ ಶಿಖರ ಸಭಾಮಂಟಪದ ಕೈಪಿಡಿ, ಭಿತ್ತಿಯಲ್ಲಿ ಗೂಡು ಮತ್ತು ನೃತ್ಯ ಸಂಗೀತಗಾರರ ಗಾರೆ ಶಿಲ್ಪಗಳಿವೆ.

ವಿಶಾಲವಾದ ಪ್ರಾಕಾರಕ್ಕೆ ಎತ್ತರವಾದ ಭಿತ್ತಿ ನಿರ್ಮಿಸಲಾಗಿದೆ. ಪಶ್ಚಿಮ, ದಕ್ಷಿಣ ಉತ್ತರಕ್ಕೆ ಪ್ರವೇಶ ಗೋಪುರಗಳಿವೆ. ಈ ಭಿತ್ತಿಯ ಒಳ ಹೊರಭಾಗಗಳಲ್ಲಿ ಅನಂತಶಯನ ಈಶ್ವರ, ನಂದಿ ಮತ್ತು ಮಿಥುನ ಶಿಲ್ಪಗಳಿವೆ. ಅಲ್ಲದೆ ಮೇಲ್ಭಾಗ ಚೈತ್ಯಕಾರಾದ ಗೂಡುಗಳನ್ನು ರಚಿಸಿ ಗಾರೆ ಶಿಲ್ಪಗಳನ್ನು ಅಳವಡಿಸಲಾಗಿದೆ. ದೇವಾಲಯಕ್ಕೆ ಎದುರಾಗಿ ನಂದಿ ಮಂಟಪ ಮತ್ತು ಪ್ರಕಾರದ ಭಿತ್ತಿಗೆ ಹೊಂದಿಕೊಂಡಂತೆ ಸಾಲು ಮಂಟಪಗಳಿವೆ. ಈ ಮಂಟಪದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಸ್ತಂಭಗಳಿವೆ.

ಪಶ್ಚಿಮಕ್ಕೆ ಮುಖ್ಯ ಗೋಪುರ ಹಂಪಿ ವಿರೂಪಾಕ್ಷ ದೇವಾಲಯದ ಗೋಪುರದಂತೆ ಎತ್ತರವಾಗಿದೆ. ಪ್ರವೇಶದ ಇಕ್ಕೆಲಗಳಲ್ಲಿ ಸುಮಾರು ಏಳು ಅಡಿ ಎತ್ತರದ ದ್ವಾರಪಾಲಕರ ವಿಗ್ರಹಗಳಿದ್ದು, ಒಳಭಾಗ ಕೈಸಾಲೆಗಳಿವೆ. ಉತ್ತರ ಭಾಗದಲ್ಲಿರುವ ಚಿಕ್ಕ ಗೋಪುರದ ಪ್ರವೇಶದ್ವಾರಕ್ಕೆ ಅರ್ಧಗಂಬಗಳು, ಹೂಬಳ್ಳಿಗಳು, ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ ಮತ್ತು ಶೈವ ದ್ವಾರಪಾಲಕರ

ಶಿಲ್ಪಗಳಿವೆ. ದಕ್ಷಿಣದ ಗೋಪುರವನ್ನು ಗರ್ಭಗೃಹವನ್ನಾಗಿ ಪರಿವರ್ತಿಸಿ ಶಿವಲಿಂಗ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.

ಈ ದೇವಾಲಯದಲ್ಲಿ ಕ್ರಿ.ಶ. ೧೫೨೮ರ ಕೃಷ್ಣದೇವರಾಯ ಶಿಲಾಶಾಸನವಿದೆ. ಇದರಲ್ಲಿ ಶ್ರೀಕೃಷ್ಣದೇವ ಮಹಾರಾಯರಿಗೆ ಪುಣ್ಯವಾಗಲೆಂದು ಬಾಗಿಲು ಕೃಷ್ಣರಾಯ ನಾಯಕನು ದೊಡ್ಡಬಸವಣ್ಣನ ಅಮೃತಪಡಿಗೆ ಭೂದಾನ ಬಿಟ್ಟ ಉಲ್ಲೇಖವಿದೆ. (ಕ.ವಿ.ವಿ., ಶಾ.ಸಂ-೧, ಕುರುಗೋಡು, ಶಾ.ಸಂ.೯)

|  |  |  |
|---|---|---|
| ೧೨ | ಗ್ರಾಮ | : ಕುರುಗೋಡು |
|  | ಹೆಸರು | : ವೀರಭದ್ರ ದೇವಾಲಯ |
|  | ಸ್ಥಳ | : ಗ್ರಾಮದ ಈಶಾನ್ಯಕ್ಕೆ ಗುಡ್ಡದ ಮೇಲೆ |
|  | ಕಾಲ | : ಕ್ರಿ.ಶ. ೧೭ನೆಯ ಶತಮಾನ |
|  | ರಾಜವಂಶ | : ವಿಜಯನಗರೋತ್ತರ |
|  | ದಿಕ್ಕು | : ಪೂರ್ವ |
|  | ಸ್ಥಿತಿ | : ಕನಿಷ್ಠ |
|  | ಮಾಧ್ಯಮ | : ಕಣಶಿಲೆ |
|  | ಪ್ರಕಟಣೆ | : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ |

ಬೆಟ್ಟದ ಮೇಲೆ ನಿರ್ಮಾಣವಾದ ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದ ಪ್ರವೇಶದ್ವಾರವು ಸಾದಾ ಕೆತ್ತನೆಯಿಂದ ಕೂಡಿದೆ. ಗರ್ಭಗೃಹದಲ್ಲಿ ಸುಮಾರು ಐದು ಅಡಿ ಎತ್ತರದ ವೀರಭದ್ರ ಐದು ಮುಖಗಳು ಹತ್ತು ಕೈಗಳನ್ನು ಹೊಂದಿರುವುದು ವಿಶೇಷ. ಸಭಾಮಂಟಪದ ಮಧ್ಯ ಎರಡು ಚೌಕಾಕಾರದ ಸ್ತಂಭಗಳಿವೆ. ಅವುಗಳ ಮಧ್ಯದಲ್ಲಿ ನಂದಿ ವಿಗ್ರಹವನ್ನು ಪ್ರತಿಷ್ಟಾಪಿಸಲಾಗಿದೆ. ದೇವಾಲಯವನ್ನು ಕಣಶಿಲೆಯಿಂದ ನಿರ್ಮಿಸಿದ್ದು ಪ್ರಸ್ತುತ ಹಾಳಾಗಿದೆ.

|  |  |  |
|---|---|---|
| ೧೩. | ಗ್ರಾಮ | : ಓರುವಾಯಿ |
|  | ಹೆಸರು | : ರಾಮಲಿಂಗೇಶ್ವರ ದೇವಾಲಯ |
|  | ಸ್ಥಳ | : ಗ್ರಾಮದ ಪೂರ್ವಕ್ಕೆ |
|  | ಕಾಲ | : ಕ್ರಿ.ಶ.೧೨ನೆಯ ಶತಮಾನ |
|  | ರಾಜವಂಶ | : ಕಲ್ಯಾಣ ಚಾಲುಕ್ಯರು |

ದಿಕ್ಕು : ಪೂರ್ವ

ಸ್ಥಿತಿ : ಮಾಧ್ಯಮ

ಮಾಧ್ಯಮ : ಕಣಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ

ಓರುವಾಯಿ ಗ್ರಾಮಕ್ಕೆ ಅತಿ ಪ್ರಾಚೀನ ಕಾಲದ ಚರಿತ್ರೆಯಿದೆ. ಈ ಗ್ರಾಮದ ಸುತ್ತಮುತ್ತಲಿನ ಪ್ರದೇಶದಲ್ಲಿ ಹಾಳುಮಣ್ಣು ಹರಡಿದ್ದು, ಶಾತವಾಹನ ಕಾಲದ ಅವಶೇಷಗಳು ಕಂಡುಬರುತ್ತವೆ. ಇಲ್ಲಿನ ಪ್ರಾಚೀನ ಶಾಸನ ಕ್ರಿ.ಶ. ೧೦೩೬ರ ಚಲುಕ್ಯ ಅರಸ ಜಗದೇಕಮಲ್ಲನ ಕಾಲದ್ದು. ಆತನ ರಾಣಿ ದೇಮಲದೇವಿಯು ತನ್ನ ತಾಯಿ ಮಹಾದೇವಿಯ ದೇಹ(ಲಿಂಗ)ವನ್ನು ಗಂಗೆಯಲ್ಲಿ ಬಿಟ್ಟುಬಂದ ಮಹಾದೇವ ಷಡಂಗಿ, ಕೃಷ್ಣಯ್ಯ ಹಾಗೂ ತುಪ್ಪದ ದೇವಯ್ಯ ಎಂಬ ಬ್ರಾಹ್ಮಣರಿಗೆ ಓರುವಾಯಿ ಗ್ರಾಮವನ್ನು ದಾನವಾಗಿ ಕೊಟ್ಟಿದ್ದನ್ನು ಹೇಳಿದೆ. ಇಲ್ಲಿ ಸ್ಥಾನಚಾರ್ಯರ ಪರಂಪರೆಯೇ ಬೆಳೆದುಬಂದಿತು. ಈ ದೇವಾಲಯವನ್ನು ಶಾಸನಗಳಲ್ಲಿ ಕಲಿದೇವರೆಂದು ಕರೆದು ತ್ರಿಲೋಕ ಪಂಡಿತರ ಸಿದ್ದಯ್ಯ, ಭೀಮರಾಣಿ ಪಂಡಿತ, ಚೀಲರಾಶಿಗುರು ಎಂಬುವರು ಇದರ ಸ್ಥಾನಪತಿಗಳಾಗಿದ್ದರು. ಇವರಲ್ಲಿ ಭೀಮರಾಶಿ ಪಂಡಿತನು ಅತ್ಯಂತ ಪ್ರಸಿದ್ಧವಾಗಿದ್ದರು. ಅವನು "ಯಮನಿಯಮ ಧ್ಯಾನದಾರಣ, ಮೌನಾನುಷ್ಠಾನ, ಜನಸಮಾಥ, ಶೀಲಸಂಪನ್ನನು ಗುರುದೇವ ದ್ವಿಜ ಪೂಜಾ ಗಣೋತ್ಪನ್ನನು ಲಾಕುಳಾಗಮ ಸಮಯ ಸಮುದ್ಧರಣನು, ಯಂತ್ರ ತಂತ್ರ ಮಂತ್ರೋದ್ಧರಣ ಪ್ರವೀಣನು, ಸಕಲದರ್ಶನಾಗಮರ್ಥ ಕೋವಿದನು" ಆಗಿದ್ದನು. ಈತನು ಓರುವಾಯಿಯ ಕಲಿದೇವ ದೇವಾಲಯದ ಜೊತೆಗೆ ಕೂತನೂರು ವಿರೂಪಾಕ್ಷ ದೇವಾಲಯ ದೇನೂರು ಮಹಾಕಾಳ ದೇವಾಲಯ ಮತ್ತು ಕುರುಗೋಡು ಭೋಗೇಶ್ವರ ದೇವಾಲಯಗಳ ಸ್ಥಾನಾಚಾರ್ಯತ್ವನ್ನು ಪಡೆದಿದ್ದನು.

ಪ್ರಾಚೀನ ಕಾಲದಲ್ಲಿ ಕಲಿದೇವ ದೇವಾಲಯವೆಂದು ಪ್ರಸಿದ್ಧವಾದ ಇದು ಗರ್ಭಗೃಹ ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪಗಳಿಂದ ಕೂಡಿದೆ. ಗರ್ಭಗೃಹದ ಪ್ರವೇಶ ದ್ವಾರಕ್ಕೆ ಪದ್ಮಗಳು ಹೂಬಳ್ಳಿಗಳು ಅರ್ಧಗಂಭಗಳು ಲಲಾಟಬಿಂಬದಲ್ಲಿ ಗಜಲಕ್ಷ್ಮೀ ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತ ದ್ವಾರಪಾಲಕರ ವಿಗ್ರಹಗಳಿವೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಅಂತರಾಳದ ಪ್ರವೇಶದ್ವಾರವು ಕೂಡ ಇದೇ ರೀತಿಯಾಗಿದ್ದು, ಲಲಾಟ ಬಿಂಬದಲ್ಲಿ ಭಕ್ತನ ಶಿಲ್ಪ ಇಕ್ಕೆಲಗಳಲ್ಲಿ ಮತ್ತು ಮೇಲ್ಭಾಗ ಜಾಲಂಧರಗಳಿವೆ. ಅಂತರಾಳದ ಪ್ರವೇಶದ್ವಾರದ ಇಕ್ಕೆಲುಗಳಲ್ಲಿರುವ ಚೌಕಾಕಾರದ ಎರಡು ಸ್ತಂಭ ಒಳ ಹೊರ ಸರಿದ ಮೂರು ಪಟ್ಟಿಕೆಗಳು, ಮಧ್ಯ ಅಡ್ಡ ಪಟ್ಟಿಕೆಗಳು, ಮೇಲ್ಭಾಗ ಫಲಕ ಬೋದಿಗೆಗಳಿಂದ ಕೂಡಿದೆ.

ತೆರೆದ ಸಭಾಮಂಟಪ ಮಧ್ಯದ ನಾಲ್ಕು ಸ್ತಂಭ ಕೆಳಗೆ ಮೇಲೆ ಚೌಕ, ಮಧ್ಯ ಹದಿನಾರು–ಎಂಟು ಭಾಗದ ಪಟ್ಟಿಕೆಗಳು ಚೌಕಾಕಾರದ ಫಲಕ ಬೋದಿಗೆಗಳಿಂದ ಕೂಡಿದೆ. ನಾಲ್ಕು ಸ್ತಂಭಗಳ ಮಧ್ಯದ ಅಂಕಣದ ಭುವನೇಶ್ವರಿಯಲ್ಲಿ ಪದ್ಮವಿದೆ. ಸಭಾಮಂಟಪದ ಅರ್ಧ ಭಿತ್ತಿಯ ಮೇಲೆ ಕಕ್ಷಾಸನ ಅದರ ಹೊರ–ಒಳ ಭಾಗದಲ್ಲಿ ಪದ್ಮಸಾಲು, ಸಂಗೀತ ನೃತ್ಯಕಾರರ ಉಬ್ಬು ಶಿಲ್ಪಗಳಿವೆ. ಭಿತ್ತಿಗೆ ಹೊಂದಿಕೊಂಡು ಚೌಕಾಕಾರದ ಸ್ತಂಭಗಳನ್ನು ನಿಲ್ಲಿಸಲಾಗಿದೆ.

ಸಭಾಮಂಟಪದ ಸುತ್ತಲಿರುವ ಕಕ್ಷಾಸನ ಮುಖಮಂಟಪದಲ್ಲಿ ಮುಂದುವರೆದಿದೆ. ಇದರಲ್ಲಿ ಚೌಕಾಕಾರದ ನಾಲ್ಕು ಸ್ತಂಭಗಳಿವೆ. ಪ್ರವೇಶಕ್ಕೆ ಸೋಪಾನಗಳನ್ನು ಜೋಡಿಸಲಾಗಿದೆ. ಮುಖಮಂಟಪದ ಕೈಪಿಡಿ ಗೋಡೆಯಲ್ಲಿ ಶಿವಪಾರ್ವತಿಯರ ಗಾರೆಯ ಶಿಲ್ಪಗಳನ್ನು ಇತ್ತೀಚಿಗೆ ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಮೇಲಿರುವ ಎತ್ತರವಾದ ಶಿಖರ ದ್ರಾವಿಡ ಮಾದರಿಯಲ್ಲಿದ್ದು, ಮೇಲ್ಭಾಗ ಗುಮ್ಮಟಕಾರದಲ್ಲಿದೆ. ಕಣಶಿಲೆಯಿಂದ ನಿರ್ಮಿಸಿದ ಈ ದೇವಾಲಯವನ್ನು ಕ್ರಮೇಣ ಜೀರ್ಣೋದ್ಧಾರಗೊಳಿಸಲಾಗಿದೆ.

೧೪. ಗ್ರಾಮ : ಕೋಳೂರು

ಹೆಸರು : ಗಂಗಾಧರೇಶ್ವರ ದೇವಾಲಯ

ಸ್ಥಳ : ಗ್ರಾಮದ ಪಶ್ಚಿಮಕ್ಕೆ

ಕಾಲ : ಕ್ರಿ.ಶ.೧೨ನೆಯ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯರು

ದಿಕ್ಕು : ಪೂರ್ವ

ಸ್ಥಿತಿ : ಮಧ್ಯಮ

ಮಾಧ್ಯಮ : ಕಣಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ.

ತ್ರಿಕೂಟಾಚಲವಾದ ದೇವಾಲಯಕ್ಕೆ ಮೂರು ಗರ್ಭಗೃಹಗಳಿವೆ. ಅವುಗಳಿಗೆ ಹೊಂದಿಕೊಂಡು ತೆರೆದ ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದೆ. ಪಶ್ಚಿಮ ಗರ್ಭಗೃಹದ ಪ್ರವೇಶದ್ವಾರಕ್ಕೆ ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ ಇಕ್ಕೆಲಗಳಲ್ಲಿ ದ್ವಾರಪಾಲಕರ ಬದಲಾಗಿ ಸ್ತಂಭಗಳಿವೆ. ದಕ್ಷಿಣ ಮತ್ತು ಉತ್ತರದ ಗರ್ಭಗೃಹಗಳು ಇದೇ ಮಾದರಿಯಲ್ಲಿವೆ. ಈ ಎರಡು ಗರ್ಭಗೃಹಗಳಲ್ಲಿದ್ದ ಶಿವಲಿಂಗಗಳು ಹಾಳಾಗಿವೆ. ಎಲ್ಲಾ ಗರ್ಭಗೃಹಗಳ ಮುಂದೆ ತೆರೆದ ಅಂತರಾಳಗಳಿವೆ. ಅವುಗಳ ಪ್ರವೇಶದ ಇಕ್ಕೆಲಗಳಲ್ಲಿ ಚೌಕಾಕಾರದ ಎರಡು ಸ್ತಂಭಗಳಿವೆ. ಸಭಾಮಂಟಪದ ಮಧ್ಯ ಚೌಕಾಕಾರದ

ನಾಲ್ಕು ಸ್ತಂಭಗಳ ಕೆಳಗೆ ಮೇಲೆ ಚೌಕ ಮಧ್ಯ ಎಂಟು-ಹದಿನಾರು ಭಾಗದ ಪಟ್ಟಿಕೆಗಳು ಮೇಲೆ ಚೌಕಾಕಾರದ ಫಲಕ ಬೋದಿಗೆಗಳಿಂದ ಕೂಡಿದೆ. ಒಂದು ಸ್ತಂಭದ ಮೇಲೆ ಬೊಲೋಜನ ಸ್ತಂಭವೆಂದು ಉಲ್ಲೇಖಿಸುವ ಶಾಸನವಿದೆ. ದೇವಾಲಯದ ಹೊರಗೋಡೆಯನ್ನು ಸಂಪೂರ್ಣವಾಗಿ ಜೀರ್ಣೋದ್ಧಾರಗೊಳಿಸಲಾಗಿದ್ದು, ಇದರ ನಿರ್ಮಾಣಕ್ಕಾಗಿ ಕಣಶಿಲೆಯನ್ನು ಬಳಸಲಾಗಿದೆ.

೧೫. ಗ್ರಾಮ : ಕೋಳೂರು
ಹೆಸರು : ರಾಮಲಿಂಗೇಶ್ವರ ದೇವಾಲಯ
ಸ್ಥಳ : ಗ್ರಾಮದ ನೈರುತ್ಯಕ್ಕೆ
ಕಾಲ : ಕ್ರಿ.ಶ.೧೨ನೆಯ ಶತಮಾನ
ರಾಜವಂಶ : ಕಲ್ಯಾಣ ಚಾಲುಕ್ಯರು
ದಿಕ್ಕು : ಪೂರ್ವ
ಸ್ಥಿತಿ : ಮಧ್ಯಮ
ಮಾಧ್ಯಮ : ಕಣಶಿಲೆ
ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ,

ಕಣಶಿಲೆಯಲ್ಲಿ ನಿರ್ಮಾಣವಾದ ಈ ದೇವಾಲಯವು ತ್ರಿಕೂಟಾಚಲವಾಗಿದೆ. ಮೂರು ಗರ್ಭಗೃಹಗಳು, ಮುಖ್ಯ ಗರ್ಭಗೃಹಕ್ಕೆ ಅಂತರಾಳ, ಸಭಾಮಂಟಪಗಳನ್ನು ಹೊಂದಿದೆ. ಪಶ್ಚಿಮ ಭಾಗದ ಗರ್ಭಗೃಹದ ಪ್ರವೇಶದ್ವಾರಕ್ಕೆ ಅರ್ಧಗಂಬಗಳು ಲಲಾಟಬಿಂಬದಲ್ಲಿ ಪದ್ಮ ಇಕ್ಕೆಲಗಳಲ್ಲಿ ದ್ವಾರಪಾಲಕರ ಬದಲಾಗಿ ಕುಂಬಗಳಿವೆ. ಇದಕ್ಕೆ ಹೊಂದಿಕೊಂಡಂತೆ ತೆರೆದ ಅಂತರಾಳದ ಪ್ರವೇಶದಲ್ಲಿ ಕೆಳಗೆ ಚೌಕ ಮೇಲೆ ವೃತ್ತಾಕಾರದಲ್ಲಿರುವ ಎರಡು ಸ್ತಂಭಗಳಿವೆ. ದಕ್ಷಿಣ ಉತ್ತರ ಭಾಗದಲ್ಲಿರುವ ಗರ್ಭಗೃಹದ ಪ್ರವೇಶದ್ವಾರಗಳನ್ನು ಹೂಬಳ್ಳಿಗಳು, ಪದ್ಮಗಳು ಲಲಾಟಬಿಂಬದಲ್ಲಿ ಗಜಲಕ್ಷ್ಮೀ, ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತ ದ್ವಾರಪಾಲಕರ ಮೂರ್ತಿಗಳಿಂದ ಅಲಂಕರಿಸಲಾಗಿದೆ. ಎರಡು ಗರ್ಭಗೃಹಗಳಲ್ಲಿ ಶಿವಲಿಂಗಗಳು ಒಂದರಲ್ಲಿ ಅನ್ನಪೂರ್ಣೇಶ್ವರಿ, ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಸಭಾಮಂಟಪದಲ್ಲಿಯ ನಾಲ್ಕು ಸ್ತಂಭಗಳು ಕೆಳಗೆ ಮೇಲೆ ಚೌಕ ಮಧ್ಯೆ ಎಂಟು-ಹದಿನಾರು ಭಾಗದ ಪಟ್ಟಿಕೆಗಳು ಮತ್ತು ಮೇಲ್ಭಾಗ ಫಲಕ ಬೋದಿಗೆಗಳನ್ನು ಹೊಂದಿವೆ. ಇವುಗಳ ಮಧ್ಯೆ ನಂದಿ ಶಿಲ್ಪವಿದೆ. ಮುಖಮಂಟಪದ ಇಕ್ಕೆಲಗಳಲ್ಲಿ ಕೈಸಾಲೆಗಳಿವೆ. ಗರ್ಭಗೃಹದ ಮೇಲಿನ ಗೊಮ್ಮಟಕಾರದ ಶಿಖರದಲ್ಲಿ ಉಬ್ಬುಶಿಲ್ಪಗಳನ್ನು ಅಳವಡಿಸಲಾಗಿದೆ.

ಈ ದೇವಾಲಯದ ಆವರಣದಲ್ಲಿ ಹರಿಶಂಕರನ ಚಿಕ್ಕ ಗುಡಿ ಇದೆ. ಗರ್ಭಗೃಹ, ಅಂತರಾಳವನ್ನು ಹೊಂದಿದೆ. ಅಂತರಾಳದ ಪ್ರವೇಶ ದ್ವಾರವನ್ನು ಅರ್ಧಗಂಭಗಳು, ಪದ್ಮಗಳು,

ಲಲಾಟಬಿಂಬದಲ್ಲಿ ಗಜಲಕ್ಷ್ಮೀ ಮತ್ತು ಶೈವದ್ವಾರಪಾಲಕರ ಶಿಲ್ಪಗಳಿಂದ ಅಲಂಕರಿಸಲಾಗಿದೆ. ಗರ್ಭಗೃಹದಲ್ಲಿ ಎತ್ತರವಾದ ಪೀಠದ ಮೇಲೆ ಶಿವಲಿಂಗ ಅದರ ಹಿಂಭಾಗ ಕೈಗಳಲ್ಲಿ ಶಂಕ ಚಕ್ರ ಗದೆ ಹಿಡಿದು ನಿಂತ ವಿಷ್ಣು ಶಿಲ್ಪವಿದೆ. ಈ ಎರಡು ದೇವಾಲಯಗಳನ್ನು ಕಣಶಿಲೆಯಿಂದ ನಿರ್ಮಿಸಿದ್ದು, ಜೀರ್ಣೋದ್ಧಾರಗೊಳಿಸಲಾಗಿದೆ.

೧೬. ಗ್ರಾಮ : ಮೋಕಾ

ಹೆಸರು : ಮುದಿಮಲ್ಲೇಶ್ವರ ದೇವಾಲಯ

ಸ್ಥಳ : ಗ್ರಾಮದ ಪೂರ್ವಕ್ಕೆ ಹಗರಿನದಿ ದಂಡೆ

ಕಾಲ : ಕ್ರಿ.ಶ.೧೫ನೆಯ ಶತಮಾನ

ರಾಜವಂಶ : ವಿಜಯನಗರ

ದಿಕ್ಕು : ಪೂರ್ವ

ಸ್ಥಿತಿ : ಮಧ್ಯಮ

ಮಾಧ್ಯಮ : ಕಣಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ

ಕಣಶಿಲೆಯಲ್ಲಿ ನಿರ್ಮಾಣವಾದ ಈ ದೇವಾಲಯವು ಗರ್ಭಗೃಹ ಮತ್ತು ತೆರೆದ ಸಭಾಮಂಟಪಗಳಿಂದ ಕೂಡಿದೆ. ಈ ದೇವಾಲಯವು ಗರ್ಭಗೃಹವು ಭೂಮಟ್ಟದಲ್ಲಿರುವ ಗವಿಯಲ್ಲಿದೆ. ಇದರಲ್ಲಿ ಈಶ್ವರ, ನಂದಿ, ವೀರಭದ್ರನ ಶಿಲ್ಪಗಳಿವೆ. ಸುಮಾರು ಮೂರು ಅಡಿ ಎತ್ತರದ ವೀರಭದ್ರನು ಕೈಗಳಲ್ಲಿ ಬಿಲ್ಲು-ಬಾಣ, ಖಡ್ಗ, ಡಾಲುಗಳನ್ನು ಹಿಡಿದಿದ್ದಾರೆ. ಗರ್ಭಗೃಹ ಮತ್ತು ಸಭಾಮಂಟಪದ ಮಧ್ಯ ಚೌಕಾಕಾರದ ನಾಲ್ಕು ಸ್ತಂಭಗಳಿವೆ. ಇಲ್ಲಿರುವ ಎರಡು ಗೂಡುಗಳಲ್ಲಿ ಬಲಭಾಗ ಲಕ್ಷ್ಮೀ ಮೂರ್ತಿಶಿಲ್ಪಗಳಿವೆ. ಸಭಾಮಂಟಪದ ಮುಂದೆ ಇಕ್ಕೆಲಗಳಲ್ಲಿ ಸಾಲುಮಂಟಪಗಳಿವೆ.

೧೭. ಗ್ರಾಮ : ಮೋಕಾ

ಹೆಸರು : ಬಸವೇಶ್ವರ ದೇವಾಲಯ

ಸ್ಥಳ : ಗ್ರಾಮದ ಒಳಗೆ

ಕಾಲ : ಕ್ರಿ.ಶ.೧೭ನೆಯ ಶತಮಾನ

ರಾಜವಂಶ : ವಿಜಯನಗರೋತ್ತರ

ದಿಕ್ಕು : ಉತ್ತರ

ಸ್ಥಿತಿ : ಮಧ್ಯಮ

ಮಾಧ್ಯಮ : ಕಪ್ಪುಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ

ಎತ್ತರದ ಜಗಲಿಯ ಮೇಲೆ ನಿರ್ಮಾಣವಾದ ಈ ದೇವಾಲಯವು ಗರ್ಭಗೃಹ ಮತ್ತು ತೆರೆದ ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದ ಪ್ರವೇಶದ್ವಾರಕ್ಕೆ ಪದ್ಮಗಳಿವೆ. ಗರ್ಭಗೃಹದಲ್ಲಿ ಈಶ್ವರ ನಂದಿ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. ಸಭಾ ಮಂಟಪಕ್ಕೆ ಪಶ್ಚಿಮ ಮತ್ತು ಉತ್ತರದಲ್ಲಿ ಪ್ರವೇಶದ್ವಾರಗಳಿವೆ. ಇವುಗಳನ್ನು ಪದ್ಮಗಳು ಹೂವಿನ ಎಸಳುಗಳು ಲಲಾಟ ಬಿಂಬದಲ್ಲಿ ಗಣೇಶ, ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತ ದ್ವಾರಪಾಲಕರ ಶಿಲ್ಪಗಳಿಂದ ಅಲಂಕರಿಸಲಾಗಿದೆ. ಎರಡು ಭಾಗದ ಪಟ್ಟಿಕೆಗಳಲ್ಲಿ ಗಂಗೆ, ಯಮುನೆಯರು, ಪದ್ಮ ಹಿಡಿದು ನಿಂತಿದ್ದಾರೆ. ಅದರ ಒಂದು ಭಾಗ ಸುರುಳಿಯಾಕಾರದಲ್ಲಿ ಸುತ್ತಿಕೊಂಡು ಮೇಲೆಕ್ಕೇರಿದೆ. ಸಭಾಮಂಟಪದ ಮಧ್ಯದ ನಾಲ್ಕು ಚೌಕಾಕಾರದ ಸ್ತಂಭಗಳ ಚತುರ್ಮುಖಗಳಲ್ಲಿ ಶಿವಪಾರ್ವತಿ, ಭಕ್ತ ಪ್ರಹ್ಲಾದ, ಬೇಡರ ಕಣ್ಣಪ್ಪ, ಅರ್ಧನಾರೀಶ್ವರ, ವೀರಭದ್ರ, ನಂದಿ ಭಕ್ತರ ಅನೇಕ ಶಿಲ್ಪಗಳಿವೆ. ಮೇಲ್ಭಾಗದಲ್ಲಿ ಪುಷ್ಪ ಬೋದಿಗೆಗಳಿವೆ. ಗರ್ಭಗೃಹದ ಹೊರ ಅಧಿಷ್ಠಾನದಲ್ಲಿ ಉಪಾನ, ಜಗತಿ, ತ್ರಿಪಟ್ಟ ಕುಮುದ, ಪದ್ಮಭಾಗಗಳು, ಭಿತ್ತಿಗೆಯಲ್ಲಿ ಅಲ್ಲಲ್ಲಿ ಉಬ್ಬು ಶಿಲ್ಪಗಳಿವೆ. ಗರ್ಭಗೃಹದ ಮೇಲೆ ಅರ್ಧಗಂಬಗಳು ಗೂಡುಗಳಿಂದ ಕೂಡಿದ ದ್ರಾವಿಡ ಮಾದರಿಯ ಶಿಖರವಿದೆ. ಈ ದೇವಾಲಯದ ಪಕ್ಕದಲ್ಲಿ ಅಮ್ಮನವರ ಗುಡಿಯಿದೆ. ಇದರಲ್ಲಿ ಇತ್ತೀಚಿನ ಪಾರ್ವತಿ ಮೂರ್ತಿ ಪ್ರತಿಷ್ಠಾಪಿಸಲಾಗಿದೆ. ಅದರ ಪಕ್ಕದಲ್ಲಿ ಮತ್ತೊಂದು ಗುಡಿಯಲ್ಲಿ ಮಹಿಷ ಮರ್ದನಿಯ ಮೂರ್ತಿಯಿದೆ. ವಿಶಾಲವಾದ ಪ್ರಾಕಾರ ಭಿತ್ತಿಗೆ ಪೂರ್ವದಲ್ಲಿ ಪ್ರವೇಶ ದ್ವಾರವಿದೆ. ಪಶ್ಚಿಮ ದ್ವಾರದ ಮೇಲಿರುವ ಚಿಕ್ಕ ಗೋಪುರದ ಗೂಡಿನಲ್ಲಿ ಶಿವಪಾರ್ವತಿಯರ ಮೂರ್ತಿ ನಿರ್ಮಿಸಲಾಗಿದೆ.

### ೪.೩. ವೈಷ್ಣವ ದೇವಾಲಯಗಳು

೧. ಗ್ರಾಮ : ಓರುವಾಯಿ

ಹೆಸರು : ಗಣೇಶ ದೇವಾಲಯ

ಸ್ಥಳ : ಗ್ರಾಮದ ಪೂರ್ವಕ್ಕೆ

ಕಾಲ : ಕ್ರಿ.ಶ. ೧೧೯೩

ರಾಜವಂಶ : ಕಲ್ಯಾಣ ಚಾಲುಕ್ಯರು

ದಿಕ್ಕು : ಉತ್ತರ

ಸ್ಥಿತಿ : ಕನಿಷ್ಠ

ಮಾಧ್ಯಮ : ಕಣಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ.

ಈ ದೇವಾಲಯವು ಗರ್ಭಗೃಹ ಮತ್ತು ತೆರೆದ ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದ ಪ್ರವೇಶದ್ವಾರಕ್ಕೆ ಪದ್ಮಗಳು, ಹೂವಿನ ಎಸಳು, ಅರ್ಧಗಂಭ, ಅಲಂಕಾರತತೆ ಇವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮೀ ಅದರ ಮೇಲ್ಭಾಗ ಔತ್ತರೇಯ ಶಿಖರ ಪಟ್ಟಿಕೆಗಳು ಇಕ್ಕೆಲಗಳಲ್ಲಿ ದ್ವಾರಪಾಲಕರ ಬದಲಾಗಿ ಗಜಗಳಿವೆ. ಗರ್ಭಗೃಹದಲ್ಲಿ ಸುಮಾರು ಮೂರು ಅಡಿ ಎತ್ತರದ ಗಣೇಶ ಶಿಲ್ಪವಿದೆ.

ತೆರೆದ ಸಭಾಮಂಟಪದ ಮಧ್ಯ ಚೌಕಾಕಾರದ ನಾಲ್ಕು ಸ್ತಂಭಗಳು ಮೇಲ್ಭಾಗ ಬೋದಿಗೆಗಳಿಂದ ಕೂಡಿದೆ. ಹತ್ತು ಸ್ತಂಭಗಳ ಕೆಳಗೆ ಚೌಕಾಕಾರದ ಮಧ್ಯ ಅಷ್ಟ ಭಾಗ ನಂತರ ವೃತ್ತಾಕಾರದಲ್ಲಿವೆ. ಸಭಾಮಂಟಪಕ್ಕೆ ಹೊಂದಿಕೊಂಡು ಮುಂಚಾಚಿದ ಚಿಕ್ಕ ಮುಖಮಂಟಪದ ಪ್ರವೇಶಕ್ಕೆ ಸೋಪಾನಗಳಿವೆ. ಈ ದೇವಾಲಯದ ನಿರ್ಮಾಣಕ್ಕಾಗಿ ಕಣಶಿಲೆ ಬಳಸಲಾಗಿದೆ.

ಈ ದೇವಾಲಯದ ಕ್ರಿ.ಶ. ೧೧೯೫ರ ಶಾಸನದಲ್ಲಿ ಏಚಿಶೆಟ್ಟಿ ಎಂಬುವನು ವಿನಾಯಕ ದೇವರಿಗೆ ದೇವಾಲಯವನ್ನು ಕಟ್ಟಿಸುತ್ತಾನೆ. ಇದರ ಚೈತ್ರ ಪವಿತ್ರ ನೈವೇದ್ಯ, ಅಂಗಬೋಗ, ರಂಗಬೋಗ, ಜೀರ್ಣೋದ್ಧಾರಕ್ಕೆ ಸಿಂಧವಂಶದ ರಾಚಮಲ್ಲನ ಮೊಮ್ಮಗನು ಇರುಂಗೋಳದೇವನ ಮಗ ಇಮ್ಮಡಿ ರಾಚಮಲ್ಲದೇವನು ಭೂದಾನ ನೀಡಿದ ಉಲ್ಲೇಖವಿದೆ. ಇಲ್ಲಿನ ಕ್ರಿ.ಶ. ೧೨೧೭ರ ಶಾಸನ ಹೊಯ್ಸಳ ದೊರೆ ವೀರಬಲ್ಲಾಳನ ಕಾಲದ್ದಾಗಿದೆ. ಇದರಲ್ಲಿ ಈತನ ಸಾಮಂತ ಬಸವಣ್ಣ ದಂಡನಾಯಕನು ವಿನಾಯಕ ದೇವರಿಗೆ ಭೂದಾನ ಕೊಟ್ಟ ಉಲ್ಲೇಖವಿದೆ. ಇದೇ ವೇಳೆಯಲ್ಲಿ ಏಚಿಸೆಟ್ಟಿಯು ವಿನಾಯಕ ದೇವಸ್ಥಾನವನ್ನು ಭೀಮರಾಶಿ ಗುರುಗಳ ಶಿಷ್ಯ ಚೀಲರಾಶಿಗೆ ದಾನ ಪೂರ್ವಕವಾಗಿ ಕೊಟ್ಟನೆಂದು ಶಾಸನದಲ್ಲಿ ದಾಖಲಿಸಿದೆ.

೨. ಗ್ರಾಮ : ಕೋಳೂರು

ಹೆಸರು : ಸೂರ್ಯನಾರಾಯಣ ದೇವಾಲಯ

ಸ್ಥಳ : ಗ್ರಾಮದ ಒಳಗೆ

ಕಾಲ : ಕ್ರಿ.ಶ.೧೨ನೆಯ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯರು

ದಿಕ್ಕು : ಪೂರ್ವ

ಸ್ಥಿತಿ : ಮಧ್ಯಮ

ಮಾಧ್ಯಮ : ಕಣಶಿಲೆ

ಪ್ರಕಟಣೆ : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ.

ಕಣಶಿಲೆಯಲ್ಲಿ ನಿರ್ಮಾಣವಾದ ಪಂಚಕೂಟ ದೇವಾಲಯವಿದೆ. ಪೂರ್ವ, ಪಶ್ಚಿಮ, ಉತ್ತರಕ್ಕೆ ಒಂದೊಂದು ದಕ್ಷಿಣಕ್ಕೆ ಎರಡು ಹೀಗೆ ಒಟ್ಟು ಐದು ಗರ್ಭಗೃಹಗಳು ಅವುಗಳಿಗೆ ಹೊಂದಿಕೊಂಡು ಅಂತರಾಳಗಳು ವಿಶಾಲವಾದ ಸಭಾಮಂಟಪದಿಂದ ಕೂಡಿದೆ.

ಪಶ್ಚಿಮ ಗರ್ಭಗೃಹದ ಪ್ರವೇಶದ್ವಾರಕ್ಕೆ ಇಕ್ಕೆಲಗಳಲ್ಲಿ ದ್ವಾರಪಾಲಕರ ಬದಲಾಗಿ ಕುಂಬಗಳಿವೆ. ಗರ್ಭಗೃಹದಲ್ಲಿ ಶಿವಲಿಂಗ ಅಂತರಾಳದಲ್ಲಿ ನಂದಿವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ. ದಕ್ಷಿಣ ಗರ್ಭಗೃಹದ ಪ್ರವೇಶದ್ವಾರಕ್ಕೆ ಲಲಾಟಬಿಂಬದಲ್ಲಿ ಗಜಲಕ್ಷ್ಮೀ ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಗದೆ ಹಿಡಿದು ನಿಂತ ದ್ವಾರಪಾಲಕರ ಶಿಲ್ಪಗಳಿವೆ. ಗರ್ಭಗೃಹದಲ್ಲಿ ಸುಮಾರು ಐದು ಅಡಿ ಎತ್ತರದ ಭೈರವನ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಕಪಾಲುಗಳನ್ನು ಹಿಡಿದಿದ್ದಾನೆ. ಇದರ ಬಲಭಾಗದ ಇನ್ನೊಂದು ಗರ್ಭಗೃಹದ ಪ್ರವೇಶ ದ್ವಾರಕ್ಕೆ ಉಬ್ಬುಶಿಲ್ಪಗಳು, ಹೂವಿನ ಎಸುಳುಗಳು ಪದ್ಮಗಳು ಅರ್ಧಗಂಬಗಳಿವೆ. ಇಕ್ಕೆಲಗಳಲ್ಲಿ ತ್ರಿಶೂಲ ಡಮರು ಹಿಡಿದು ನಿಂತ ದ್ವಾರಪಾಲಕರ ಶಿಲ್ಪಗಳು ಲಲಾಟಬಿಂಬದ ಮೇಲ್ಭಾಗ ಮುಂಚಾಚಿದ ಪಟ್ಟಿಕೆ ಅದರ ಮೇಲೆ ಔತ್ತರೆಯ ಮಾದರಿಯ ಶಿಖರ ಪಟ್ಟಿಕೆಗಳಿವೆ. ಗರ್ಭಗೃಹದಲ್ಲಿ ಹತ್ತು ಕೈಗಳನ್ನು ಹೊಂದಿದ ಮಹಿಷ ಮರ್ದನಿಯ ಮೂರ್ತಿವಿದೆ. ಪೂರ್ವ ಗರ್ಭಗೃಹದ ಪ್ರವೇಶದ್ವಾರವು ಮಹಿಷಮರ್ದಿನಿಯ ಪ್ರವೇಶ ದ್ವಾರದಂತಿದೆ. ಗರ್ಭಗೃಹದಲ್ಲಿ ಏಳು ಕುದುರೆಗಳನ್ನು ಹೊಂದಿದ ಪೀಠದ ಮೇಲೆ ಎರಡು ಕೈಗಳಲ್ಲಿ ಪದ್ಮಗಳನ್ನು ಹಿಡಿದು ಸಮಭಂಗಿಯಲ್ಲಿ ನಿಂತ ಸೂರ್ಯ ಶಿಲ್ಪವಿದೆ. ಗರ್ಭಗೃಹದ ಮುಂದೆ ತೆರೆದ ಅಂತರಾಳವಿದೆ. ಉತ್ತರ ಭಾಗದಲ್ಲಿರುವ ಗರ್ಭಗೃಹದ ಪ್ರವೇಶದ್ವಾರಕ್ಕೆ ಅರ್ಧಗಂಬಗಳು, ಇಕ್ಕೆಲಗಳಲ್ಲಿ ದ್ವಾರ ಪಾಲಕರ ಬದಲಾಗಿ ಕುಂಬಗಳಿವೆ. ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತ ನಾರಾಯಣನು ಕೈಗಳಲ್ಲಿ ಶಂಖ, ಚಕ್ರ, ಗದೆ ಹಿಡಿದಿದ್ದು, ಇನ್ನೊಂದು ಬಲಕೈ ಅಭಯ ಮುದ್ರೆಯಲ್ಲಿದೆ. ಈ ಎಲ್ಲಾ ಗರ್ಭಗೃಹಗಳಿಗೆ ತೆರೆದ ಅಂತರಾಳವೂ ಅವುಗಳ ಇಕ್ಕೆಲಗಳ ಚೌಕಾಕಾರದ ಎರಡೆರಡು ಕಂಬಗಳು ಉದ್ದ, ಅಡ್ಡ, ಪಟ್ಟಿಕೆಗಳಿಂದ ಅಲಂಕೃತಗೊಂಡಿದೆ.

ಅಂತರಾಳಗಳಿಗೆ ಹೊಂದಿಕೊಂಡು ವಿಶಾಲವಾದ ಸಭಾಮಂಟಪಕ್ಕೆ ಉತ್ತರದಲ್ಲಿ ಪ್ರವೇಶದ್ವಾರವಿದೆ ಸಭಾಮಂಟಪದಲ್ಲಿ ಒಟ್ಟು ಎಂಟು ಸ್ತಂಭಗಳಿವೆ. ಪ್ರತಿ ನಾಲ್ಕು ಸ್ತಂಭಗಳನ್ನು ಪ್ರತ್ಯೇಕಿಸಿ ಎರಡು ಅಂಕಣಗಳನ್ನಾಗಿ ವಿಭಾಗಿಸಲಾಗಿದೆ. ಮೊದಲ ರೀತಿಯ ಕಪ್ಪುಕಲ್ಲಿನ ನಾಲ್ಕು

ಸ್ತಂಭ ಕೆಳಗೆ, ಮೇಲೆ ಚೌಕ ಮಧ್ಯ ಹದಿನಾರು-ಎಂಟು ಭಾಗದ ಪಟ್ಟಿಕೆಗಳು, ಮೇಲ್ಭಾಗ ವೃತ್ತಾಕಾರದ ಮುಚ್ಚಳ ಫಲಕ ಮತ್ತು ಬೋದಿಗೆಗಳಿಂದ ಕೂಡಿವೆ. ಎರಡನೆಯ ರೀತಿಯ ನಾಲ್ಕು ಕಪ್ಪು ಕಣಶಿಲೆಯ ಸ್ತಂಬಗಳು ಸರಳ ಶೈಲಿಯಲ್ಲಿವೆ. ದೇವಾಲಯದ ಹೊರಭಿತ್ತಿಯ ಅಧಿಷ್ಠಾನ ಭಾಗವು ಮಣ್ಣಲ್ಲಿ ಹೂತು ಹೋಗಿದೆ. ಕಪೋತ ಭಾಗದಲ್ಲಿ ಮುಂಚಾಚಿದ ಪಟ್ಟಿಕೆ ಇದೆ. ಎಲ್ಲಾ ಗರ್ಭಗೃಹಗಳ ಮೇಲೆ ಮೊದಲು ಕದಂಬ ನಾಗರ ಶಿಖರಗಳಿರಬಹುದು. ಈಗ ಇವುಗಳಲ್ಲಿ ಒಂದು ಮಾತ್ರ ಕಾಣಸಿಗುತ್ತದೆ.

ಈ ದೇವಾಲಯದಲ್ಲಿ ಕ್ರಿ.ಶ. ೧೧೪೭ರ ಕಲ್ಯಾಣ ಚಾಲುಕ್ಯ ಅರಸ ಜಗದೇಕ ಮಲ್ಲದೇವನ ಶಿಲಾಶಾಸನವಿದೆ. ಫಣಿ ವಂಶದ ರೇವುಗಾವುಂಡನು, ಸೋಮೇಶ್ವರ, ಕಾಲೇಶ್ವರ, ಮಲ್ಲಿಕಾರ್ಜುನ, ಆದಿತ್ಯ, ವಿಘ್ನೇಶ್ವರ, ಭೈರವ ಹಾಗೂ ವೇಳೇಶ್ವರ ದೇವಾಲಯಗಳನ್ನು ಕಟ್ಟಿಸುತ್ತಾನೆ. ಆತನ ಭಾವ ವಿಚ್ಚಿಶೆಟ್ಟಿಯ ಜೊತೆಗೂಡಿ ವಿಷ್ಣು ದೇವಾಲಯ, ಬಾವಿ, ಶಿವಗೃಹ ಹಾಗೂ ಕೆರೆಗಳನ್ನು ನಿರ್ಮಿಸಿದನು. ಇಮ್ಮಡಿ ಭೀಮರಸನು, ಸೂರ್ಯನಾರಾಯಣ ದೇವಾಲಯಕ್ಕೆ ಭೂದಾನ ಮಾಡಿದ್ದನ್ನು ಶಾಸನ ಉಲ್ಲೇಖಿಸುತ್ತದೆ. (ಸೌ.ಇ.ಇ. ix-i ೧೧೪೭, ಪುಟ-೨೪೯)

**೪.೪. ಜೈನ ದೇವಾಲಯಗಳು:**

| | | |
|---|---|---|
| ೧. | ಗ್ರಾಮ | : ಕುರುಗೋಡು |
| | ಹೆಸರು | : ಸಿದ್ಧೇಶ್ವರ (ಘನಲಿಂಗೇಶ್ವರ)ದೇವಾಲಯ ಅಥವಾ ಜೈನ ದೇವಾಲಯ |
| | ಸ್ಥಳ | : ಗ್ರಾಮದ ಪಶ್ಚಿಮಕ್ಕೆ ಮುಷ್ಟಗಟ್ಟೆ ರಸ್ತೆ ಎಡಭಾಗ |
| | ಕಾಲ | : ಕ್ರಿ.ಶ.೧೨ನೆಯ ಶತಮಾನ |
| | ರಾಜವಂಶ | : ಕಲ್ಯಾಣ ಚಾಲುಕ್ಯರು |
| | ದಿಕ್ಕು | : ಪೂರ್ವ |
| | ಸ್ಥಿತಿ | : ಮಧ್ಯಮ |
| | ಮಾಧ್ಯಮ | : ಕಣಶಿಲೆ |
| | ಪ್ರಕಟಣೆ | : ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ |

ಸಿದ್ಧೇಶ್ವರ ದೇವಾಲಯದ ಗರ್ಭಗೃಹದ ಸುಮಾರು ಮೂರು ಅಡಿ ಎತ್ತರದ ಶಿವಲಿಂಗವನ್ನು ಸಿಂಹಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಪ್ರವೇಶ ದ್ವಾರಕ್ಕೆ ಪದ್ಮಗಳು, ಹೂವಿನ ಎಸಳುಗಳು, ಅರ್ಧಗಂಭಗಳು, ಲಲಾಟಬಿಂಬದಲ್ಲಿ ಈಶ್ವರಲಿಂಗ ಅದರ ಮೇಲ್ಭಾಗ ಔತ್ತರೇಯ ಶಿಖರ ಪಟ್ಟಿಕೆಗಳು, ಇಕ್ಕೆಲಗಳಲ್ಲಿ ಕುಂಬಗಳಿವೆ. ಈ ಕುಂಬಗಳನ್ನು ಅರ್ಧಗಂಬಗಳು ಮಕರ

ಮತ್ತು ಕೀರ್ತಿ ಮುಖಗಳಿಂದ ಅಲಂಕರಿಸಲಾಗಿದೆ. ಅಂತರಾಳ ಮತ್ತು ಸಭಾಮಂಟಪದ ಪ್ರವೇಶ ದ್ವಾರಗಳೂ ಇದೇ ರೀತಿಯಲ್ಲಿವೆ. ಅಂತರಾಳದ ಇಕ್ಕೆಲಗಳಲ್ಲಿರುವ ಚೌಕಾಕಾರದ ಎರಡು ಸ್ತಂಬಗಳು ಉದ್ದ-ಅಡ್ಡ ಪಟ್ಟಿಕೆಗಳಿಂದ ಕೂಡಿವೆ. ಅಂತರಾಳದಲ್ಲಿ ನಂದಿಶಿಲ್ಪವಿದೆ. ಸಭಾಮಂಟಪದ ಮಧ್ಯ ಚೌಕಾಕಾರದ ನಾಲ್ಕು ಸ್ತಂಬಗಳು ಕೆಳಗೆ, ಮೇಲೆ ಚೌಕಾಕಾರ ಮಧ್ಯ ಹದಿನಾರು-ಎಂಟು ಭಾಗದ ಪಟ್ಟಿಕೆ, ಮೇಲ್ಭಾಗ ಚೌಕಾಕಾರದ ಫಲಕ, ಬೋದಿಗೆಗಳಿಂದ ಕೂಡಿವೆ. ಸಭಾಮಂಟಪದಲ್ಲಿರುವ ಎರಡು ಗೂಡುಗಳನ್ನು ಅರ್ಧಗಂಬಗಳು, ಪದ್ಮಗಳು, ಕೆಳ ಮತ್ತು ಮೇಲೆ ಪಟ್ಟಿಕೆಗಳು, ಮೇಲ್ಭಾಗ ಔತ್ತರೇಯ ಶಿಖರ ಪಟ್ಟಿಕೆಗಳಿಂದ ಅಲಂಕರಿಸಲಾಗಿದೆ. ಮುಂದೆ ತೆರದ ಮುಖ ಮಂಟಪದಲ್ಲಿ ಚೌಕಾಕಾರದ ಎರಡು ಸ್ತಂಬಗಳಿವೆ.

ಅಧಿಷ್ಠಾನ ಭಾಗವು ಉಪಾನ, ಜಗತಿ, ಕಂಠ, ತ್ರಿಪಟ್ಟ, ಕುಮುದ, ಪದ್ಮ ಭಾಗಗಳಿಂದ ಕೂಡಿದೆ. ತ್ರಿಕೂಟ ದೇವಾಲಯವೆಂದು ಗುರುತಿಸಲ್ಪಟ್ಟಿರುವ ಇಂದಿನ ಈಶ್ವರ ದೇವಾಲಯದ ಸಮೀಪದಲ್ಲಿಯೇ ಸಿದ್ದೇಶ್ವರ ದೇವಾಲಯ ನಿರ್ಮಾಣವಾಗಿದೆ. ಪ್ರಾರಂಭದಲ್ಲಿ ಇದು ಜೈನ ದೇವಾಲಯವಾಗಿದ್ದು, ಕಾಲಾನಂತರ ಅನೇಕ ಬದಲಾವಣೆಗೆ ಒಳಗಾಗಿದೆ. ವಿಜಯನಗರ ಅರಸ ಸದಾಶಿವರಾಯನ ಕಾಲದ ಕ್ರಿ.ಶ. ೧೫೬೮ರ ಶಾಸನವೊಂದು ಈ ದೇವಾಲಯದ ಮುಖಮಂಟಪದ ಭಿತ್ತಿಯಲ್ಲಿ ದೇವಾಲಯದ ಜಿನ ದೇವರ ಅಮೃತಪಡಿ ನೈವೇದ್ಯಕ್ಕೆ ಭೂಮಿಯನ್ನು ದಾನಕೊಟ್ಟಿರುವ ವಿಷಯವನ್ನು ಉಲ್ಲೇಖಿಸಿದೆ. ಕ್ರಿ.ಶ. ೧೫೭೬ರ ತೇದಿಯುಳ್ಳ ಇನ್ನೊಂದು ಶಾಸನದಲ್ಲಿ ಮೂಲಸಂಘ ಬಲತ್ಕಾರ ಗಣಕ್ಕೆ ಸೇರಿದ ಸೂರ್ಯಪ್ಪ ಶೆಟ್ಟಿಯ ಮಗ ಗೋಮಿ ಸೆಟ್ಟಿಯು ಈ ದೇವಾಲಯ ಜೀರ್ಣೋದ್ಧಾರ ಮಾಡಿದ್ದನ್ನು ದಾಖಲಿಸಲಾಗಿದೆ. ಹಾಗಾದರೆ ಈ ಜೈನ ದೇವಾಲಯ ೧೬ನೆಯ ಶತಮಾನ ಕಾಲಾವಧಿಯ ನಂತರವೇ ಕೆಲವು ಮಾರ್ಪಾಡುಗಳಿಗೆ ಒಳಪಟ್ಟಿರಬೇಕು. ಶೈವ ಮತಾವಲಂಬಿಗಳೇ ಹೆಚ್ಚಾಗಿರುವ ಕುರುಗೋಡು ಪಟ್ಟಣದಲ್ಲಿ ಇಂಥ ಅದಲು ಬದಲು ಘಟನೆಗಳು ಸಹಜವಾಗಿಯೇ ನಡೆದಿರಬಹುದು. ದೇವಾಲಯದ ಮೂಲ ಜಿನಾಲಯದ ಬದಲಾಗಿ ಘನಲಿಂಗೇಶ್ವರನಾಗಿ ನಂತರ ಸಿದ್ಧೇಶ್ವರನಾಗಿ ಮರುನಾಮಕರಣ ಹೊಂದಿದೆ. ಇಂಥ ಬದಲಾವಣೆಗಳು ಯಾವ ಕಾಲಘಟ್ಟದಲ್ಲಿ ಹಾಗೂ ಯಾವ ಕಾರಣಕ್ಕಾಗಿ ಆದವು ಎಂದು ನಿರ್ದಿಷ್ಟವಾಗಿ ಅರ್ಥೈಸುವುದು. ಇದೇ ದೇವಾಲಯದ ವಿವರಣೆಯ ಸಂದರ್ಭದಲ್ಲಿ ಇನ್ನೊಂದು ವಿಷಯ ಪ್ರಸ್ತಾಪಿಸುವುದು ಸೂಕ್ತ. ಪಟ್ಟಣದಲ್ಲಿರುವ ನೀಲಮ್ಮನ ಮಠದ ಮಹಾದ್ವಾರ ಹಾಗೂ ಅಲ್ಲಿ ಅಳವಡಿಸಲಾಗಿರುವ ಕೆಲವು ಬಿಡಿ ಶಿಲ್ಪಗಳು ಕುತೂಹಲ ಕೆರಳಿಸುತ್ತವೆ. ಕಾರಣ ಶೈವ ಪಂಥೀಯರ ಪೂಜಾ ಕೇಂದ್ರವಾದ ಇಲ್ಲಿ ಜೈನ ಶಿಲ್ಪಾವಶೇಷಗಳು ಇರುವುವು. ಪ್ರಾಚೀನ ಜಿನಾಲಯದ ಮಹಾದ್ವಾರ ನಾಶವಾದ ನಂತರ ಅಲ್ಲಿರುವ ಅವಶೇಷಗಳನ್ನು ನೀಲಮ್ಮನ ಮಠಕ್ಕೆ ಒಯ್ದು ಜೋಡಿಸಿರಬಹುದೇ ಎಂಬ ಸಂಗತಿ ಚರ್ಚಾರ್ಹವಾದುದು.

ಒಟ್ಟಾರೆ ಕುರುಗೋಡು ಪರಿಸರದ ದೇವಾಲಯಗಳಿಗೆ ಸಂಬಂಧಿಸಿದಂತೆ ತುಲನಾತ್ಮಕವಾಗಿ ಅಧ್ಯಯನ ಮಾಡಿ ನೋಡಿದಲ್ಲಿ ಹೆಚ್ಚಿನ ಮಟ್ಟಿಗೆ ಶೈವ ದೇವಾಲಯಗಳು ಇವೆ. ಇಲ್ಲಿ ವೈಷ್ಣವ ಮತ್ತು ಜೈನದೇವಾಲಯಗಳು ಅಷ್ಟೇ ಮಹತ್ವ ಪಡೆದಿವೆ. ಕುರುಗೋಡು ಪರಿಸರದಲ್ಲಿ ಲಭ್ಯವಾದ ದೇವಾಲಯಗಳು ಕಲ್ಯಾಣ ಚಾಲುಕ್ಯರ, ವಿಜಯನಗರ ಕಾಲಕ್ಕೆ ಸೇರಿವೆ. ಒಟ್ಟಾರೆ ಈ ದೇವಾಲಯಗಳ ಅಧ್ಯಯನವನ್ನು ಮಾಡಿನೋಡಿದರೆ ಈ ದೇವಾಲಯಗಳ ವಾಸ್ತು ಶೈಲಿ ವೈಶಿಷ್ಟ್ಯತೆಯನ್ನು ಈ ಕೆಳಗೆ ಹೇಳಲಾಗಿದೆ.

ಅನೇಕ ಧಾರ್ಮಿಕ ವಿಧಿ ವಿಧಾನಗಳನ್ನು ದೇವಾಲಯದಲ್ಲಿಯೇ ನೆರವೇರಿಸಬೇಕಾಗಿರುವುದರಿಂದ ದೇವಾಲಯದ ತಳ ವಿನ್ಯಾಸ ಹೆಚ್ಚು ವಿಸ್ತಾರವಾಗಿರುತ್ತದೆ. ಸಾಮಾನ್ಯವಾಗಿ ಗರ್ಭಗೃಹ, ಅಂತರಾಳ, ನವರಂಗ ಅಥವಾ ತೆರೆದ ಸಭಾಮಂಟಪ ಮತ್ತು ಮುಖ ಮಂಟಪಗಳಿರುವುದು ಸಾಮನ್ಯ ಲಕ್ಷಣ. ದೇವಾಲಯದ ಸುತ್ತಲೂ ನಿರ್ದಿಷ್ಟಪಡಿಸಿದ ದಿಕ್ಕಿನಲ್ಲಿ ಪರಿವಾರ ದೇವತೆಗಳಿಗೆ ಚಿಕ್ಕ ಗುಡಿಗಳಿರುತ್ತವೆ. ಅಲ್ಲದೆ ಪ್ರಕಾರದಲ್ಲಿ ಕಲ್ಯಾಣಮಂಟಪ, ಉತ್ಸವ ಮಂಟಪಗಳಿರುತ್ತವೆ. ಉದಾಹರಣೆಗೆ ಕುರುಗೋಡಿನ ದೊಡ್ಡ ಬಸವೇಶ್ವರ ದೇವಾಲಯ.

ದೊಡ್ಡ ಗಾತ್ರದ ದೇವಾಲಯಗಳಲ್ಲಿ ಕಂಡುಬರುವ ಲಕ್ಷಣಗಳಲ್ಲಿ ಪ್ರದಕ್ಷಿಣ ಪಥ ಒಂದು ಗರ್ಭಗೃಹದ ಸುತ್ತಲೂ ಇರುತ್ತದೆ. ಪ್ರದಕ್ಷಿಣ ಪಥ ಸಂಪೂರ್ಣವಾಗಿ ಮುಚ್ಚಲ್ಪಟ್ಟಿರುತ್ತದೆ. ಕೆಲವು ದೇವಾಲಯಗಳಲ್ಲಿ ಬೆಳಕು ಗಾಳಿ ಬರಲು ಜಾಲಂಧ್ರಗಳನ್ನು ಇರಿಸಲಾಗಿದೆ. ಉದಾಹರಣೆಗೆ ಕುರುಗೋಡಿನ ಸಂಗಮೇಶ್ವರ ದೇವಸ್ಥಾನ.

ಕುರುಗೋಡು ಪರಿಸರದ ದೇವಾಲಯಗಳು ಎತ್ತರವಾದ ಅಧಿಷ್ಠಾನವನ್ನು ಹೊಂದಿರುತ್ತದೆ. ಅಧಿಷ್ಠಾನದ ಮೇಲ್ಭಾಗದಲ್ಲಿ ಕಪೋತ ಭಾಗ ಸಾಮಾನ್ಯವಾಗಿ ಕಂಡುಬರುತ್ತದೆ. ಚಿಕ್ಕ ಆಕಾರ ದೇವಾಲಯಗಳಲ್ಲಿ ಭಿತ್ತಿಗಳು ಸರಳವಾಗಿದ್ದರೆ ದೊಡ್ಡ ದೇವಾಲಯಗಳ ಭಿತ್ತಿಗಳು ಅಲಂಕೃತವಾಗಿರುತ್ತವೆ. ಅಂದರೆ ಭಿತ್ತಿಗಳಲ್ಲಿ ಕೃಷ್ಣ, ವೀರಭದ್ರ, ಆನೆ, ಸಿಂಹಗಳ, ಮೂರ್ತಿಗಳನ್ನು ಕೆತ್ತಲ್ಪಟ್ಟಿರುತ್ತದೆ. ಒಟ್ಟಾರೆ ಕಲ್ಯಾಣಮಂಟಪ, ಹೆಚ್ಚಿನ ಶೈವ ಮೂರ್ತಿಶಿಲ್ಪಗಳು, ಗಾರೆ ಶಿಲ್ಪಗಳು, ಗೋಪುರಗಳು, ಇಟ್ಟಿಗೆಯನ್ನು ಶಿಖರಕ್ಕೆ ಬಳಸಲಾಗಿದೆ. ಇವೆಲ್ಲವೂ ಕುರುಗೋಡು ಪರಿಸರದ ದೇವಾಲಯಗಳಲ್ಲಿ ಕಂಡುಬಂದ ವೈಶಿಷ್ಟ್ಯತೆಗಳಾಗಿವೆ.

# ಮೂರ್ತಿ ಶಿಲ್ಪಗಳು

## ೫.೧. ಪೀಠಿಕೆ

ಇತಿಹಾಸದ ಹಲವು ಅಂಶಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡಿರುವ ಕುರುಗೋಡು ಪರಿಸರ ಪ್ರಾಚೀನ ಕಾಲದಿಂದಲೂ ಮೂರ್ತಿಶಿಲ್ಪಕ್ಕೆ ತನ್ನದೇ ಆದ ವೈಶಿಷ್ಟ್ಯಪೂರ್ಣ ಕೊಡುಗೆ ನೀಡಿದೆ. ಇತಿಹಾಸವನ್ನು ರಚಿಸುವ ಆಕರಗಳಲ್ಲಿ ದೇವಾಲಯಗಳಂತೆ ಮೂರ್ತಿ ಶಿಲ್ಪವೂ ಒಂದು ಆಕರವಾಗಿದೆ. ದೇವತಾ ಮೂರ್ತಿಗಳಲ್ಲಿ ಎದ್ದುಕಾಣುವುದು ಅಸ್ವಾಭಾವಿಕ ಸ್ವರೂಪ (ರಾಮಚಂದ್ರಮೂರ್ತಿ ಎಸ್.ಕೆ., ೧೯೭೫, ಪುಟ-೫೦) ಮೂರ್ತಿ ಶಿಲ್ಪದ ರೂಪ ಕಾಣುವುದು. ಹರಪ್ಪಾ, ಮೆಹೆಂಜೋದಾರೋಗಳಲ್ಲಿ ಇಲ್ಲಿ ಮಣ್ಣಿನಲ್ಲಿ, ಮರದಲ್ಲಿ ಗೊಂಬೆಗಳನ್ನು ಮಾಡಿ ಮರದ ಬುಡದಲ್ಲಿ, ಕಟ್ಟೆಯ ಮೇಲೆ ಇಟ್ಟು ತಮಗೆ ತೋರಿ ಬಂದ ರೀತಿಯಲ್ಲಿ ಭಾವನಾತ್ಮಕವಾಗಿ ಪೂಜಿಸುತ್ತಿದ್ದರು. (ಸುಂದರ ಅ. ೧೯೯೮, ಪುಟ-೭೨) ಸೃಷ್ಟಿಕರ್ತ ಪರಮಾತ್ಮನಿಗೆ ಯಾವುದೇ ಒಂದು ನಿರ್ದಿಷ್ಟ ರೂಪವಿಲ್ಲ. ಇದು ಪರಮ ಸತ್ಯ. ಒಂದೊಂದು ದೇವರ ಮೂರ್ತಿಯು ಒಂದೊಂದು ಆಧ್ಯಾತ್ಮಿಕ ತತ್ವವನ್ನು ಒಳಗೊಂಡಿದೆ. (ಚಿದಾನಂದಮೂರ್ತಿ, ೧೯೭೯, ಪುಟ-೧೩) ವಾಸ್ತು ಶಿಲ್ಪ ಅಥವಾ ವಾಸ್ತು ಅವುಗಳಿಗೆ ಅನುಗುಣವಾಗಿ ಮೂರ್ತಿ ಶಿಲ್ಪ ರಚನೆ ಆಗುತ್ತಿತ್ತು. ಅಂದಿನ ಧಾರ್ಮಿಕ ಮತೀಯ ಹಿನ್ನೆಲೆಯಲ್ಲಿ ಹೇಳುವುದಾದರೆ ಪ್ರಸ್ತುತ ಗಾಣಪತ್ಯ ಶೈವ ವೈಷ್ಣವ ಮೂರ್ತಿಗಳು ಜೈನ ಪ್ರತಿಮೆಗಳು ಮೂರ್ತಿಶಿಲ್ಪಗಳಿಗೆ ಉದಾಹರಣೆಗಳಾಗಿವೆ.

ಮೂರ್ತಿಶಿಲ್ಪದಲ್ಲಿ ಮೂರು ವಿಧ. ೧.ಸ್ಥಾನಿಕ, ೨.ಆಸೀನ, ೩.ಶಯನ ಮೂರ್ತಿಶಿಲ್ಪಗಳೇ ಪ್ರಸ್ತುತ ಕುರುಗೋಡು ಪರಿಸರದ ಮೂರ್ತಿಗಳ ಪ್ರತಿಮಾ ಲಕ್ಷಣದ ಪ್ರಸ್ತಾವನೆಯನ್ನು ಇಲ್ಲಿ ಇಡಲಾಗಿದೆ.

**೫.೨. ಗಾಣಪತ್ಯ ಮೂರ್ತಿಶಿಲ್ಪಗಳು:**

ಗಣಪತಿಯು ಭಾರತೀಯ ಜನರಿಗೆ ಶುಭ ಸಂಕೇತ. ಶಿವ ಬ್ರಹ್ಮಾಂಡ, ಸ್ಕಂದ, ಬ್ರಹ್ಮ ವೈವರ್ತ, ಮತ್ಸ ಪದ್ಮ ಪುರಾಣಗಳು ಹಾಗೂ ರೂಪಮಂಡನ ಆಗಮಗಳು ಗಣಪತಿಯನ್ನು ಉಲ್ಲೇಖಿಸುತ್ತೇವೆ. (ದತ್ತಾತ್ರೇಯ ಜಿ. ಕುಲಕರ್ಣಿ, ಪುಟ–೨೬೭, ಅಪ್ರಕಟಿತ ಪ್ರಬಂಧ) ಶಿವಪುರಾಣವು ಗಣಪತಿಯ ಹುಟ್ಟಿನ ಬಗ್ಗೆ ತಿಳಿಸುತ್ತವೆ. ಗಣಪತಿಯು ನಾಲ್ಕು ಆರು ಹತ್ತು ಹಾಗೂ ಹದಿನಾರು ಕೈಗಳನ್ನು ಹೊಂದಿರುತ್ತದೆ. ಗಣಪತಿಯು ನಾನಾ ರೂಪಗಳಿಂದ ಪೂಜೆಗೊಳ್ಳುವನು. ಅವು ಬಾಲಗಣಪತಿ, ತರುಣ ಗಣಪತಿ ಹೇರಂಬ ಪ್ರಸಂಬ ಗಣಪತಿ, ಬಾಲಚಂದ್ರ ಹಾಗೂ ಏಕದಂತ ಶಿಲ್ಪಗಳಲ್ಲಿ ಗಣಪತಿಯನ್ನು ಸುಖಾಸನದಲ್ಲಿ ಕುಳಿತಂತೆ ನಿಂತಂತೆ ಮತ್ತು ನೃತ್ಯ ಭಂಗಿಯಲ್ಲಿಯೂ ಕಾಣುತ್ತೇವೆ. ಸಾಮಾನ್ಯವಾಗಿ ಗಣಪತಿಯು ಶಿಲ್ಪಗಳು ಕುಳಿತ ಭಂಗಿಯಲ್ಲಿದ್ದು ಆನೆ ಮುಖ ಸುತ್ತಿದ ಸೊಂಡಿಲು (ವಕ್ರತುಂಡ) ದೊಡ್ಡ ಹೊಟ್ಟೆ (ಮಹೋದರ) ನಾಲ್ಕು ಕೈಗಳಿಂದ ಕೂಡಿದವನಾಗಿ ಪಾಶ ಅಂಕುಶ ಅಭಯಮುದ್ರೆ ಸೊಂಡಿಲಲ್ಲಿ ಮೋದಕಧಾರಿಯಾಗಿ ಕಂಡುಬರುತ್ತಾನೆ. (ದತ್ತಾತ್ರೇಯ ಜಿ. ಕುಲಕರ್ಣಿ, ಪುಟ–೨೩೬, ಅಪ್ರಕಟಿತ ಪ್ರಬಂಧ)

ಪ್ರಸ್ತುತ ಅಧ್ಯಯನಕ್ಕೆ ಒಳಪಟ್ಟಂತೆ ಕುರುಗೋಡು ಪರಿಸರದಲ್ಲಿ ಇರುವ ಕೆಲವು ಗಣಪತಿ ಶಿಲ್ಪಗಳನ್ನು ಗುರುತಿಸಲಾಗಿದೆ.

| | | |
|---|---|---|
| ೧. | ಗ್ರಾಮ | : ಓರುವಾಯಿ |
| | ಶಿಲ್ಪ | : ಗಣಪತಿ |
| | ಸ್ಥಳ | : ಗ್ರಾಮದ ಪೂರ್ವಕ್ಕೆ |
| | ಕಾಲ | : ಕ್ರಿ.ಶ.೧೧೯೫ |
| | ಅಳತೆ | : ೯೦ x ೭೬ ಸೆಂ.ಮೀ. |
| | ಕೈಗಳು | : ನಾಲ್ಕು ಕೈಗಳು |
| | ಆಯುಧಗಳು | : ತ್ರಿಶೂಲ |
| | ಆಭರಣಗಳು | : ಕರಂಡ, ಮುಕುಟ, ಕರ್ಣಕುಂಡಲ |
| | ಸ್ಥಿತಿ | : ಮಧ್ಯಮ |
| | ಮಾಧ್ಯಮ | : ಕಪ್ಪುಶಿಲೆ |

ಈ ಶಿಲ್ಪವು ಸುಖಾಸನದ ಭಂಗಿಯಲ್ಲಿದೆ. ಬಲಕೈಯಲ್ಲಿ ಪರಶು, ಎಡಗೈಯಲ್ಲಿ ಮೋದಕ ಕಂಡುಬರುತ್ತದೆ. ಈ ಮೂರ್ತಿ ಚೌಕಾಕಾರದ ಪೀಠದಲ್ಲಿ ಕುಳಿತಿದೆ. ಕೆಳಭಾಗದಲ್ಲಿ ಗಣಪತಿಯ ಮೂಷಕ ವಾಹನವಿದೆ.

೨. ಗ್ರಾಮ : ಕುರುಗೋಡು
ಶಿಲ್ಪ : ಗಣೇಶ
ಸ್ಥಳ : ಪಟ್ಟಣದ ಮಧ್ಯ ಗುಡ್ಡದ ಪಕ್ಕದ ಓಣಿ
ಕಾಲಮಾನ : ಕ್ರಿ.ಶ. ೧೧-೧೨ನೇ ಶತಮಾನ
ಅಳತೆ : ೯೦ x ೮೦ ಸೆಂ.ಮೀ.
ಕೈಗಳು : ನಾಲ್ಕು ಕೈಗಳು
ಆಯುಧಗಳು : ಗದೆ, ಶಂಖ
ಆಭರಣಗಳು : ಸರ್ಪ
ಸ್ಥಿತಿ : ಮಧ್ಯಮ
ಮಾಧ್ಯಮ : ಕಪ್ಪುಶಿಲೆ

ಪಟ್ಟಣದ ಮಧ್ಯ ಗುಡ್ಡದ ಪಕ್ಕದ ಓಣಿಯಲ್ಲಿರುವ ಈ ಶಿಲ್ಪವು ದೊಡ್ಡ ಹೊಟ್ಟೆಯನ್ನು ಹೊಂದಿದ್ದು, ಉದ್ದವಾದ ಸೊಂಡಿಲು, ಹಿಂದಕ್ಕೆ ಬಾಗಿ ಕುಳಿತ ಭಂಗಿಯಲಿ ಗಣೇಶನ ಮೂರ್ತಿಯನ್ನು ನೋಡಬಹುದು.

**೫.೩. ಶಾಕ್ತ ಮೂರ್ತಿಗಳು:**

ಮಾತೃ ದೇವತೆಯ ರೂಪದಲ್ಲಿರುವ ಶಕ್ತಿದೇವತೆಯನ್ನು ಆರಾಧಿಸುವ ಪಂಥವನ್ನು ಶಾಕ್ತ ಪಂಥವೆಂದು ಕರೆಯುತ್ತಾರೆ. ಭಾರತದಲ್ಲಿ ಶಾಕ್ತ ಪಂಥದ ಚರಿತ್ರೆಯನ್ನು ಸಿಂಧೂ ಸಂಸ್ಕೃತಿಯಿಂದ ಗುರುತಿಸುತ್ತೇವೆ. ವೈಧಿಕ ಕಾಲದ ನಂತರ ಶಕ್ತಿ ದೇವತೆ ಬೆಳವಣಿಗೆ ಪ್ರಮುಖವಾಗಿ ಕಂಡುಬರುತ್ತದೆ. ಶಾಕ್ತರ ಆರಾಧ್ಯ ದೇವತೆಯೇ ಶಕ್ತಿದೇವತೆ. ಇವರುಗಳನ್ನು ಆದಿಶಕ್ತಿ, ಪರಶಕ್ತಿ, ಮಹಾಶಕ್ತಿ ಮುಂತಾಗಿ ಹೆಸರಿಸುತ್ತಾರೆ. ಈ ಕಾಲದ ದೇವತೆಗಳನ್ನು ಗೃಹಸೂತ್ರಗಳು, ಸ್ಮೃತಿಗಳು, ಉಪನಿಷತ್ತುಗಳು, ಪುರಾಣಗಳು ಮುಂತಾಗಿ ಸಾಹಿತ್ಯ ಆಕರಗಳು ಉಲ್ಲೇಖಿಸುತ್ತವೆ. ಆಯಾ ಬುಡಕಟ್ಟು ನೆಲೆಸಿರುವ ಸ್ಥಳಗಳಲ್ಲಿ ಶಕ್ತಿದೇವತೆಯ ಆರಾಧನೆಯನ್ನು ಕಾಣಬಹುದು. (ಮಹಾಂತೇಶ ಎನ್.ಎಸ್, ೨೦೦೮, ಪುಟ-೧೦೭)

ಶಕ್ತಿ ಪೂಜೆ ಅಥವಾ ಮಾತೃದೇವತೆ ಉಪಾಸನೆಯನ್ನು ಪ್ರಾಚೀನ ಸಿಂಧೂ ಸಂಸ್ಕೃತಿಯಲ್ಲಿ ಕಂಡುಬಂದಿದೆ. ಅಲ್ಲಿ ದೊರೆತ ಸ್ತ್ರೀ ವಿಗ್ರಹಗಳನ್ನು ಮಾತೃ ದೇವತೆಯ ವಿಗ್ರಹಗಳೆಂದು ಗುರುತಿಸಲಾಗುತ್ತದೆ.

ಪ್ರಸ್ತುತ ಅಧ್ಯಯನ ಕುರುಗೋಡು ಪರಿಸರ ಶಾಕ್ತ ಶಿಲ್ಪಗಳದ್ದಾಗಿದೆ. ಶಿವಶರಣೆ ನೀಲಮ್ಮ, ಸುಂಕಲಮ್ಮದೇವಿ, ಮುಂತಾದ ಶಕ್ತಿ ದೇವತೆಗಳನ್ನು ಕಾಣಬಹುದು. ಕುರುಗೋಡಿನಲ್ಲಿ ಗ್ರಾಮದೇವತೆಗಳ ಆರಾಧನೆಯಿಂದ ಕಾಯಿಲೆಗಳು ಮತ್ತು ವಿಘ್ನಗಳು ದೂರವಾಗುತ್ತೇವೆಂಬ ಪ್ರತೀತಿ ಇದೆ. ಹೀಗಾಗಿ ಈ ದೇವತೆಗಳ ಆರಾಧನೆಗೆ ಹೆಚ್ಚು ಮಹತ್ವವನ್ನು ನೀಡಲಾಗಿದೆ. ಕೆಲವು ಕಡೆಯಲ್ಲಿ ಸಪ್ತ ಮಾತೃಕೆಯರ ಮೂರ್ತಿಗಳು ಕುರುಗೋಡು ಪರಿಸರದಲ್ಲಿ ದೊರೆತಿವೆ.

೧. ಗ್ರಾಮ : ಕುರುಗೋಡು
ಶಿಲ್ಪ : ಸಪ್ತಮಾತೃಕೆಯರು
ಸ್ಥಳ : ದೊಡ್ಡ ಬಸವೇಶ್ವರ ದೇವಾಲಯದ ಹೊರಗಡೆ
ಕಾಲ : ಕ್ರಿ.ಶ.೧೧ನೇ ಶತಮಾನ
ಅಳತೆ : ೧೭ x ೩೧ ಸೆಂ.ಮೀ.
ಕೈಗಳು : ನಾಲ್ಕು ಕೈಗಳು
ಆಯುಧಗಳು : ಖಡ್ಗ, ಶಂಖ
ಆಭರಣಗಳು : ಮಣಿ ಸರಗಳು
ಸ್ಥಿತಿ : ಮಧ್ಯಮ
ಮಾಧ್ಯಮ : ಕಪ್ಪುಶಿಲೆ

ಕಕ್ಷಾಸನ ಪಟ್ಟಿಕೆಯಲ್ಲಿ ಸಪ್ತ ಮಾತೃಕೆಯ ಉಬ್ಬು ಶಿಲ್ಪಗಳಿವೆ. ನವಿಲು, ನಂದಿ, ಸುಖಾಸನದಲ್ಲಿ ಕುಳಿತಿರುವುದು, ಪಟ್ಟಿಕೆಯಲ್ಲಿ ನಾಲ್ಕು ಶಿಲ್ಪಗಳ ಜೋಡಣೆಯಾಗಿದೆ.

೨. ಗ್ರಾಮ : ಕುರುಗೋಡು
ಶಿಲ್ಪ : ಕಾಳಮ್ಮ
ಸ್ಥಳ : ಪೇಟೆಯಲ್ಲಿ
ಕಾಲ : ೧೨ನೆಯ ಶತಮಾನ
ಅಳತೆ : ೩೯ x ೨೭ ಸೆಂ.ಮೀ.
ಕೈಗಳು : ನಾಲ್ಕು ಕೈಗಳು
ಆಯುಧಗಳು : ಡಮರು, ತ್ರಿಶೂಲ, ದುಂಡು ಬಟ್ಟಲು
ಆಭರಣಗಳು : ಕಿರೀಟ, ಕೊರಳಹಾರ, ಒಡ್ಯಾಣ, ಕಡಗ.
ಸ್ಥಿತಿ : ಉತ್ತಮ
ಮಾಧ್ಯಮ : ಕಪ್ಪುಶಿಲೆ

ಗರ್ಭಗುಡಿಯಲ್ಲಿ ೧ ಅಡಿ ಎತ್ತರದ ಪೀಠದ ಮೇಲೆ ಸಮಭಂಗಿಯಲ್ಲಿ ಕುಳಿತ ಕರಿಯ ಕಲ್ಲಿನಲ್ಲಿ ಖಂಡರಿಸಿದ ಸ್ತ್ರೀದೇವತೆಯ ಮೂರ್ತಿಯಿದೆ. ತಲೆಯ ಮೇಲೆ ಕಿರೀಟ, ಕೊರಳಲ್ಲಿ ಹಾರ, ನಡುವಿಗೆ ಒಡ್ಯಾಣ, ಕಾಲಲ್ಲಿ ಕಡಗ ತೊಟ್ಟ ಮೂರ್ತಿಯು ಸುಂದರ ಮತ್ತು ಆಕರ್ಷಕ. ಮೇಲಿನ ಎಡಗೈಯಲ್ಲಿ ಡಮರು, ಬಲಗೈಯಲ್ಲಿ ತ್ರಿಶೂಲ, ಕೆಳಗಿನ ಬಲಗೈಯಲ್ಲಿ ಬಳೆ ಮತ್ತು ಎಡಗೈಯಲ್ಲಿ ದುಂಡುಬಟ್ಟಲು ಹಿಡಿದಿರುವ ಪ್ರಶಾಂತ ರೂಪದ ಮೂರ್ತಿಯೇ ಕಾಳಮ್ಮ (ಹನುಮಂತ ರೆಡ್ಡಿ ವೈ, ೧೯೯೧, ಪುಟ-೨೯) ಮೂರ್ತಿಯಾಗಿದೆ.

೩. ಗ್ರಾಮ : ಕುರುಗೋಡು
ಶಿಲ್ಪ : ಸುಂಕ್ಲಮ್ಮ
ಸ್ಥಳ : ಕಂಪ್ಲಿ ರಸ್ತೆಯ ಪಕ್ಕ
ಕಾಲ : ೧೨ನೆಯ ಶತಮಾನ
ಅಳತೆ : ೪೯ x ೮೦ ಸೆಂ.ಮೀ.
ಕೈಗಳು : ಎರಡು ಕೈಗಳು
ಆಯುಧಗಳು : ಡಮರು, ತ್ರಿಶೂಲ
ಆಭರಣಗಳು : ತಾಳಿ, ಕಟಾಣಿ
ಸ್ಥಿತಿ : ಉತ್ತಮ
ಮಾಧ್ಯಮ : ಬಿಳಿಶಿಲೆ

ಕುರುಗೋಡಿನ ಗ್ರಾಮದೇವತೆಯಾದ ಸುಂಕ್ಲಮ್ಮದೇವಿ ಗರ್ಭಗೃಹದಲ್ಲಿ ಕುಳಿತಿದ್ದು, ಕೈಗಳಲ್ಲಿ ತ್ರಿಶೂಲ ಮತ್ತು ಡಮರು ಹಿಡಿದು ಸುಖಾಸನ ಭಂಗಿಯಲ್ಲಿದೆ. (ಹನುಮಂತರೆಡ್ಡಿ ವೈ, ೧೯೯೧, ಪುಟ-೬)

೪. ಗ್ರಾಮ : ಓರುವಾಯಿ
ಶಿಲ್ಪ : ಗಜಲಕ್ಷ್ಮಿ
ಸ್ಥಳ : ಗ್ರಾಮದ ಪೂರ್ವಕ್ಕೆ
ಕಾಲ : ೧೨ನೆಯ ಶತಮಾನ
ಅಳತೆ : ೧೧೦ x ೮೫ ಸೆಂ.ಮೀ.
ಕೈಗಳು : ಎರಡು ಕೈಗಳು
ಆಯುಧಗಳು : ಪದ್ಮ

ಆಭರಣಗಳು : ಕೊರಳಹಾರ

ಸ್ಥಿತಿ : ಮಧ್ಯಮ

ಮಾಧ್ಯಮ : ಕಪ್ಪುಶಿಲೆ

ಸೂರ್ಯ ನಾರಾಯಣ ದೇವಾಲಯದ ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತ ನಾರಾಯಣನು ಕೈಗಳಲ್ಲಿ ಶಂಖ, ಚಕ್ರ, ಗದೆ ಹಿಡಿದಿದ್ದು ಇನ್ನೊಂದು ಕೈ ಅಭಯಮುದ್ರೆಯಲ್ಲಿದೆ.

೨. ಗ್ರಾಮ : ಕುರುಗೋಡು

ಶಿಲ್ಪ : ಶ್ರೀಕೃಷ್ಣ

ಸ್ಥಳ : ದೊಡ್ಡಬಸವೇಶ್ವರ ಗುಡಿಯ ಗರುಡಗಂಭದಲ್ಲಿ

ಕಾಲ : ೧೫ನೆಯ ಶತಮಾನ

ಅಳತೆ : ೪೧ x ೬೦ ಸೆಂ.ಮೀ.

ಕೈಗಳು : ಎರಡು ಕೈಗಳು

ಆಭರಣಗಳು : ಕೊರಳಹಾರ

ಸ್ಥಿತಿ : ಉತ್ತಮ

ಮಾಧ್ಯಮ : ಬಿಳಿಶಿಲೆ

ಶ್ರೀದೊಡ್ಡ ಬಸವೇಶ್ವರ ದೇವಸ್ಥಾನದ ಗುಡಿಯ ಗರುಡ ಗಂಭದಲ್ಲಿ ಶ್ರೀಕೃಷ್ಣನ ಮೂರ್ತಿಯನ್ನು ನೋಡಬಹುದು. ಈ ಮೂರ್ತಿಯು ಶೇಷನ ಮೇಲೆ ಪ್ರಶಾಂತವಾಗಿ ಮಲಗಿದಂತಿದೆ.

೩. ಗ್ರಾಮ : ಕುರುಗೋಡು

ಶಿಲ್ಪ : ಕೃಷ್ಣ

ಸ್ಥಳ : ಅಕ್ಷತ ಗಣೇಶನ ಹತ್ತಿರ

ಕಾಲ : ೧೧-೧೨ನೇ ಶತಮಾನ

ಅಳತೆ : ೬೫ x ೩೦ ಸೆಂ.ಮೀ.

ಕೈಗಳು : ಎರಡು ಕೈಗಳು

ಆಭರಣಗಳು : ಕಿರೀಟ, ಕೊರಳಹಾರ, ಕೊಳಲು

ಸ್ಥಿತಿ : ಉತ್ತಮ

ಮಾಧ್ಯಮ : ಆಕಾಶ ಬಣ್ಣದ ಶಿಲೆ

ಶ್ರೀಕೃಷ್ಣ ದೇವಾಲಯದ ಗರ್ಭಗೃಹದಲ್ಲಿ ನಿಂತ ಕೃಷ್ಣನು ಕೈಗಳಲ್ಲಿ ಕೊಳಲು ಹಿಡಿದಿದ್ದು, ಶ್ರೀಕೃಷ್ಣನ ಮೂರ್ತಿಯ ಹಿಂದೆ ಹಸು ಕೊಳಲಿನ ಗಾನವನ್ನು ಆಲಿಸುವಂತೆ ಬಿಂಬಿಸಲಾಗಿದೆ.

೪. ಗ್ರಾಮ : ಕುರುಗೋಡು
ಶಿಲ್ಪ : ಕೋಟೆ ಆಂಜನೇಯ
ಸ್ಥಳ : ಉಜಾಳೇಶ್ವರ ದೇವಾಲಯದ ಹತ್ತಿರ
ಕಾಲ : ೧೧-೧೨ನೆಯ ಶತಮಾನ
ಅಳತೆ : ೧೨೦ x ೬೦ ಸೆಂ.ಮೀ.
ಕೈಗಳು : ಎರಡು ಕೈಗಳು
ಆಯುಧ : ಅಭಯಮುದ್ರೆ
ಆಭರಣಗಳು : ಕೊರಳಹಾರ
ಸ್ಥಿತಿ : ಉತ್ತಮ
ಮಾಧ್ಯಮ : ಕಪ್ಪುಶಿಲೆ

ಉಜಾಳೇಶ್ವರ ದೇವಾಲಯದ ಹತ್ತಿರ ಕೋಟೆ ಆಂಜನೇಯ ದೇವಸ್ಥಾನ ಇದೆ. ಈ ದೇವಸ್ಥಾನದ ಗರ್ಭಗುಡಿಯಲ್ಲಿ ಆಂಜನೇಯ ಮೂರ್ತಿ ಶಿಲ್ಪ ಇದೆ. ಈತನಿಗೆ ಎರಡು ಕೈಗಳಿದ್ದು, ಒಂದು ಕೈಯಲ್ಲಿ ಪರ್ವತವನ್ನು ಎತ್ತಿ ಹಿಡಿದಿದ್ದು ಮತ್ತೊಂದು ಕೈಯಲ್ಲಿ ಅಭಯಮುದ್ರೆಯಲ್ಲಿದೆ.

**೫.೫. ಶೈವ ಮೂರ್ತಿಶಿಲ್ಪಗಳು:**

ಈ ವಿಭಾಗದಲ್ಲಿ ಶೈವ ಮತ್ತು ವೀರಶೈವವೆಂಬ ಭೇದವನ್ನು ಪರಿಗಣಿಸಿಲ್ಲ. ಇದಕ್ಕೆ ಕಾರಣ ಶಾಸನಶಿಲ್ಪಗಳು. ಒಂದಕ್ಕೊಂದು ಪೂರಕವಾಗಿ ಬೆಳೆದು ಬಂದಿರುವುದರಿಂದ ಒಟ್ಟಿಗೆ ಸೇರಿಸಿ ಅಧ್ಯಯನ ಮಾಡಲಾಗಿದೆ. ಈ ಧರ್ಮದ ಶಾಸನಶಿಲ್ಪಗಳನ್ನು ಒಂದೆಡೆ ಸೇರಿಸಿದಾಗ ಒಂದು ಅಂಶ ಸ್ಪಷ್ಟವಾಗಿ ಗೋಚರವಾಗುತ್ತದೆ. ಅದೇನೆಂದರೆ ಹತ್ತು ಅಥವಾ ಹನ್ನೊಂದನೆಯ ಶತಮಾನದ ಶಾಸನಗಳಲ್ಲಿ ಶಿವಲಿಂಗದ ಪೂಜೆ ಮಾಡುತ್ತಿರುವ ಯತಿಗಳ ತಲೆಗೂದಲು ಕಾಲಿನ ಹಿಮ್ಮಡಿಯವರೆಗೂ ಉದ್ದವಾಗಿ ಇಳಿಬಿದ್ದಿರುವುದನ್ನು ಕಾಣಬಹುದು. ಬಹುಶಃ ಇವರೆಲ್ಲ ಶೈವಧರ್ಮಿಯರೆಂದು ಹೇಳಬಹುದು. ಕಾಪಾಲಿಕ ಯತಿಗಳಿಗೆ ತಲೆಗೂದಲು ಹೀಗೆಯೇ ಉದ್ದವಾಗಿ ಇಳಿಬಿದ್ದಿರುತ್ತದೆ.

ಪ್ರಸ್ತುತ ಅಧ್ಯಾಯದ ಶೈವ ಶಿಲ್ಪಗಳಲ್ಲಿ ಪ್ರಮುಖವಾಗಿ ಲಿಂಗ, ಭೈರವ, ವೀರಭದ್ರ, ಮಹೇಶ್ವರ, ಪಾರ್ವತಿ, ನಂದಿಶಿಲ್ಪ ಕಾಣುತ್ತೇವೆ. ಈ ಕುರುಗೋಡು ಪರಿಸರದಲ್ಲಿ ಹೆಚ್ಚಿಗೆ ಶೈವ ಧರ್ಮಕ್ಕೆ ಅನ್ವಯಿಸುವ ಮೂರ್ತಿಶಿಲ್ಪಗಳು ಹೆಚ್ಚು ಕಂಡುಬರುತ್ತವೆ.

೧. ಗ್ರಾಮ : ಕುರುಗೋಡು

ಶಿಲ್ಪ : ಉಮಾಮಹೇಶ್ವರ

ಸ್ಥಳ : ಕುರುಗೋಡು–ಕಂಪ್ಲಿ ರಸ್ತೆಯ ಕೆರೆಯ ದಂಡೆ

ಕಾಲ : ೧೧–೧೨ನೆಯ ಶತಮಾನ

ಅಳತೆ : ೪೦ x ೩೫ ಸೆಂ.ಮೀ.

ಕೈಗಳು : ಎರಡು ಕೈಗಳು

ಆಯುಧಗಳು : ಬಿಲ್ಲು, ಬಾಣ

ಆಭರಣಗಳು : ಕೊರಳಹಾರ, ಕಟಿಬಂಧ, ಕಿರೀಟ

ಸ್ಥಿತಿ : ಉತ್ತಮ

ಮಾಧ್ಯಮ : ಕಪ್ಪು ಮಿಶ್ರಿತ ಬಳಪಕಲ್ಲು

ಉಮಾಮಹೇಶ್ವರ ಶಿಲ್ಪವು ಉತ್ಕೃಷ್ಠ ಕಲಾಕೃತಿ. ಇದನ್ನು ಕಪ್ಪುಮಿಶ್ರಿತ ಬಳಪದ ಕಲ್ಲಿನಲ್ಲಿ ಕೆತ್ತಲಾಗಿದೆ. ಬಿಲ್ಲುಬಾಣ ಆಯುಧದಾರಿಯಾದ ಶಿವನು ಕಿರೀಟಧಾರಿಯಾಗಿದ್ದಾನೆ. ಕೊರಳಲ್ಲಿ ಹಾರ ಮತ್ತು ಸೊಂಟದಲ್ಲಿ ಕಟಿಬಂಧಗಳಿವೆ. ಮಹೇಶ್ವರನ ಜೊತೆಗೆ ಉಮಾ ಮಹೇಶ್ವರನ ತೊಡೆಯ ಮೇಲೆ ಕುಳಿತಿದ್ದಾಳೆ. (ಬಾಲಸುಬ್ರಹ್ಮಣ್ಯ, ೨೦೧೦, ಪುಟ–೧೨೦)

೨. ಗ್ರಾಮ : ಕುರುಗೋಡು

ಶಿಲ್ಪ : ಶಿವ

ಸ್ಥಳ : ಹಿಂಡುಲಿ ಸಂಗಮೇಶ್ವರ ದೇವಾಲಯದ ಮುಂಭಾಗ

ಕಾಲ : ೧೨ನೆಯ ಶತಮಾನ

ಅಳತೆ : ೧೩೫ x ೧೧೮ ಸೆಂ.ಮೀ.

ಕೈಗಳು : ಎರಡು ಕೈಗಳು

ಆಯುಧಗಳು : ಚಕ್ರ, ಗದೆ

ಆಭರಣಗಳು : ಕಿರೀಟ, ಹಾರ, ಕಟಿಬಂಧ

ಸ್ಥಿತಿ : ಕನಿಷ್ಠ

ಮಾಧ್ಯಮ : ಕಪ್ಪುಶಿಲೆ

ಹಿಂಡುಲಿ ಸಂಗಮೇಶ್ವರ ದೇವಾಲಯದ ಮುಂಭಾಗದಲ್ಲಿರುವ ಕಟಾಂಗಧಾರಿ ಶಿವನ ಶಿಲ್ಪವು ತ್ರುಟಿತವಾಗಿದೆ. ಸುಂದರವಾದ ಶಿಲ್ಪ ಕಿರೀಟ ಹೊಂದಿದ್ದು, ಹಾರ ಹಾಗೂ ಕಟಿಬಂಧಗಳಿಂದ

ಅಲಂಕರಣೆಗೊಂಡಿದೆ. ಸುಮಾರು ನಾಲ್ಕುವರೆ ಅಡಿ ಎತ್ತರದ ಈ ಶಿಲ್ಪವು ಚಕ್ರಗದೆಯನ್ನು ಹಿಡಿದಿದೆ. (ಬಾಲಸುಬ್ರಹ್ಮಣ್ಯ, ೨೦೧೦, ಪುಟ-೧೨೦)

೩. ಗ್ರಾಮ : ಮೋಕಾ

ಶಿಲ್ಪ : ಭೈರವ

ಸ್ಥಳ : ಗ್ರಾಮದ ಪೂರ್ವಕ್ಕೆ ಹಗರಿ ನದಿ ದಂಡೆ

ಕಾಲ : ೧೫ನೆಯ ಶತಮಾನ

ಅಳತೆ : ೯೦ x ೫೮ ಸೆಂ.ಮೀ.

ಕೈಗಳು : ಎರಡು ಕೈಗಳು

ಆಯುಧಗಳು : ಬಿಲ್ಲು, ಬಾಣ, ಖಡ್ಗ, ಡಾಲು

ಆಭರಣಗಳು : ಕೊರಳಹಾರ

ಸ್ಥಿತಿ : ಮಧ್ಯಮ

ಮಾಧ್ಯಮ : ಕಣಶಿಲೆ

ಸೂರ್ಯನಾರಾಯಣ ದೇವಾಲಯದ ಗರ್ಭಗೃಹದಲ್ಲಿ ಸುಮಾರು ೫ ಅಡಿ ಎತ್ತರದ ಭೈರವಮೂರ್ತಿ ಇದೆ. ಕೈಗಳಲ್ಲಿ ಬಿಲ್ಲು, ಬಾಣ, ಖಡ್ಗ, ಡಾಲುಗಳನ್ನು ಹಿಡಿದಿದ್ದಾನೆ.

೪. ಗ್ರಾಮ : ಕುರುಗೋಡು

ಶಿಲ್ಪ : ವೀರಭದ್ರ

ಸ್ಥಳ : ದೊಡ್ಡಬಸವೇಶ್ವರ ಗುಡಿಯ ಗರುಡ ಗಂಭದಲ್ಲಿ

ಕಾಲ : ೧೫ನೆಯ ಶತಮಾನ

ಅಳತೆ : ೨೯ x ೨೩ ಸೆಂ.ಮೀ.

ಕೈಗಳು : ನಾಲ್ಕು ಕೈಗಳು

ಆಯುಧಗಳು : ಬಿಲ್ಲು, ಬಾಣ, ಖಡ್ಗ

ಆಭರಣಗಳು : ಕೊರಳಹಾರ

ಸ್ಥಿತಿ : ಉತ್ತಮ

ಮಾಧ್ಯಮ : ಕಪ್ಪುಶಿಲೆ

ಶ್ರೀದೊಡ್ಡಬಸವೇಶ್ವರ ದೇವಸ್ಥಾನದ ಗರುಡಗಂಭದಲ್ಲಿ ವೀರಭದ್ರ ಮೂರ್ತಿಯಿದೆ. ಈ ವೀರಭದ್ರ ಮೂರ್ತಿಯು ನಾಲ್ಕು ಕೈಗಳನ್ನು ಹೊಂದಿದ್ದು, ಖಡ್ಗ, ಬಿಲ್ಲು, ಬಾಣಗಳನ್ನು

ಹಿಡಿದಿದೆ. ಬಲಗಡೆ ಭಾಗದಲ್ಲಿ ಟಗರು ಎಡಭಾಗದಲ್ಲಿ ಸ್ತ್ರೀವಿಗ್ರಹ ನಿಂತ ಭಂಗಿಯಲ್ಲಿ ವೀರಭದ್ರ ಮೂರ್ತಿ ಇದೆ.

೫. ಗ್ರಾಮ : ಕುರುಗೋಡು

ಶಿಲ್ಪ : ದೊಡ್ಡಬಸವೇಶ್ವರ

ಸ್ಥಳ : ದೊಡ್ಡಬಸವೇಶ್ವರ ಗರ್ಭಗುಡಿ

ಕಾಲ : ೧೫ನೆಯ ಶತಮಾನ

ಅಳತೆ : ೪೮೦ x ೬೦೦ ಸೆಂ.ಮೀ.

ಆಭರಣಗಳು : ಕೊರಳಹಾರ (ಗೆಜ್ಜೆಗಳು)

ಸ್ಥಿತಿ : ಉತ್ತಮ

ಮಾಧ್ಯಮ : ಬಿಳಿಶಿಲೆ

ಶ್ರೀದೊಡ್ಡಬಸವೇಶ್ವರ ಕುರುಗೋಡಿನ ಪ್ರಮುಖವಾದ ದೈವ. ಈ ದೇವರಿಂದಲೇ ಕುರುಗೋಡು ಹೆಸರು ಬಂದಿದೆ ಎಂಬುದು ಜನ ಪ್ರತೀತಿ. ಗರ್ಭಗೃಹದ ಮಧ್ಯಭಾಗದಲ್ಲಿ ಪ್ರಾಕೃತವಾಗಿ ರಚನೆಗೊಂಡಿರುವ ಬೃಹತ್ ಶಿಲೆಯಿಂದ ಕಂಡರಿಸಿದ ಮಲಗಿದ ಭಂಗಿಯಲ್ಲಿದ್ದ ನಂದಿ (ಬಸವೇಶ್ವರ) ಮೂರ್ತಿಯಿದೆ. ಇದು ಸುಮಾರು ೪೮೦ x ೬೦೦ ಸೆಂ.ಮೀ. ದೊಡ್ಡ ಮೂರ್ತಿಯಾಗಿರುವುದರಿಂದ ಇದನ್ನೇ ದೊಡ್ಡ ಬಸವೇಶ್ವರ ಎಂದು ಕರೆಯಲಾಗುತ್ತಿದೆ.

**೫.೬. ಜೈನ ಮೂರ್ತಿಶಿಲ್ಪಗಳು:**

ಭಾರತೀಯ ಸಂಸ್ಕೃತಿಗೆ ಕರ್ನಾಟಕ ಜೈನ ಮೂರ್ತಿಶಿಲ್ಪಗಳ ಕೊಡುಗೆ ಅಪಾರ. ಜೈನ ತೀರ್ಥಂಕರರು ಉತ್ತರ ಭಾರತದಲ್ಲಿ ಜನಿಸಿದರು. ಜೈನಶಾಸ್ತ್ರ ಗ್ರಂಥಗಳನ್ನು ರಚಿಸಿದ ಆಚಾರ್ಯರು ಹೆಚ್ಚಿನವರು ಕರ್ನಾಟಕದವರು. ಪ್ರಾಚೀನ ಕರ್ನಾಟಕದಲ್ಲಿ ಶ್ರವಣಬೆಳಗೊಳ, ಬನವಾಸಿ, ಕೊಪ್ಪಳ, ಹಲಸಿ, ಹುಂಚ ಮುಂತಾದ ಕಡೆಗಳಲ್ಲಿ ಜೈನಕೇಂದ್ರಗಳು ಪ್ರವರ್ಧಮಾನಕ್ಕೆ ಬಂದವು. ಕ್ರಿ.ಶ. ಆರಂಭದ ಕಾಲದಲ್ಲಿ ರಾಜಾಶ್ರಯ ದೊರೆತಿದ್ದರಿಂದ ಜೈನಧರ್ಮ ಹೆಚ್ಚು ಪ್ರವರ್ಧಮಾನಕ್ಕೆ ಬಂತು. ಜೈನಧರ್ಮವು ಅಭಿವೃದ್ಧಿಯಾಯಿತು. ಅದಕ್ಕೆ ಸಂಬಂಧಿಸಿದಂತೆ ಮೂರ್ತಿಶಿಲ್ಪ, ಚಿತ್ರಕಲೆ, ಮುಂತಾದವುಗಳು ಪ್ರಾರಂಭವಾದವು. ಜೈನಧರ್ಮ ಬೋಧಿಸಿದ ತೀರ್ಥಂಕರು ದಿವ್ಯ ದೃಷ್ಟಿಯನ್ನು ಪಡೆದು ಮಾನವರಾದರೂ ದೇವತಾ ಪುರುಷರಂತೆ ಆರಾಧಿಸಲ್ಪಟ್ಟರು. (ಚಿದಾನಂದಮೂರ್ತಿ ಎಂ., ೧೯೭೯, ಪುಟ-೭೫) ಪ್ರಸ್ತುತ ಅಧ್ಯಯನವನ್ನು ಕುರುಗೋಡು ಪರಿಸರ ಜೈನಶಿಲ್ಪಕ್ಕೆ ಸೀಮಿತ ಮಾಡಿಕೊಂಡು ನೋಡಿದಲ್ಲಿ ಇಲ್ಲಿ ಒಂದೇ ತೀರ್ಥಂಕರ ಮೂರ್ತಿ ಇದೆ.

೧. ಗ್ರಾಮ : ಕುರುಗೋಡು

ಶಿಲ್ಪ : ತೀರ್ಥಂಕರ

ಸ್ಥಳ : ಸಿದ್ಧೇಶ್ವರ ದೇವಾಲಯದ ಹತ್ತಿರ

ಕಾಲ : ೧೨ನೆಯ ಶತಮಾನ

ಅಳತೆ : ೩೧ x ೧೮ ಸೆಂ.ಮೀ.

ಕೈಗಳು : ಎರಡು ಕೈಗಳು

ಆಭರಣಗಳು : ಬಳ್ಳಿಗಳ ಹಾರ

ಸ್ಥಿತಿ : ಮಧ್ಯಮ

ಮಾಧ್ಯಮ : ಕಪ್ಪುಶಿಲೆ

ಸಿದ್ಧೇಶ್ವರ ದೇವಾಲಯದ ಹತ್ತಿರ ತೀರ್ಥಂಕರ ಮೂರ್ತಿಶಿಲ್ಪವನ್ನು ನೋಡಬಹುದು. ಈ ತೀರ್ಥಂಕರ ಮೂರ್ತಿಶಿಲ್ಪಕ್ಕೆ ಎರಡು ಕೈಗಳಿದ್ದು, ಕುಳಿತು ಧ್ಯಾನಮುದ್ರೆಯಲ್ಲಿದೆ.

## ಉಪಸಂಹಾರ

ಕರ್ನಾಟಕವು ಪುರಾತನ ಸಂಸ್ಕೃತಿ ಮತ್ತು ಐತಿಹಾಸಿಕ ಮಹತ್ವವನ್ನು ಪಡೆದಿದ್ದು ಪ್ರಾಚೀನ ನಾಡಗಿದೆ. ಇಲ್ಲಿರುವ ಅನೇಕ ಪ್ರದೇಶಗಳು ಹಲವಾರು ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ. ಇಂತಹವುಗಳಲ್ಲಿ ಕುರುಗೋಡು ಪ್ರದೇಶವು ಒಂದಾಗಿದೆ.

ಶಾಸನಗಳು ಮತ್ತು ದೇವಾಲಯಗಳು ಸಮಕಾಲೀನ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ ವಿಷಯಗಳನ್ನು ಸಮಗ್ರವಾಗಿ ಅಧ್ಯಯನ ಮಾಡಲು ಮುಖ್ಯ ಆಕರಗಳಾಗಿವೆ. ಈ ಹಿನ್ನೆಲೆಯಲ್ಲಿ ಕುರುಗೋಡು ಪರಿಸರದಲ್ಲಿ ಕ್ಷೇತ್ರಕಾರ್ಯ ಮಾಡಿ ಶಾಸನಗಳು, ದೇವಾಲಯಗಳು ಮತ್ತು ಶಿಲ್ಪಗಳನ್ನು ಒಂದೆಡೆಗೆ ಸಂಗ್ರಹಿಸಿ ವಸ್ತುನಿಷ್ಠವಾಗಿ ಪುನರಚಿಸುವ ಉದ್ದೇಶದೊಂದಿಗೆ ಪ್ರಾರಂಭವಾದ ಈ ಅಧ್ಯಯನದಲ್ಲಿ ಅನೇಕ ಮಹತ್ವದ ಹೊಸ ಹೊಸ ವಿಚಾರಗಳು ತಿಳಿಯುವಂತಾಗಿದೆ.

ಕುರುಗೋಡು ಪರಿಸರದ ಇತಿಹಾಸ ಮತ್ತು ವೈಭವ ಸಂಸ್ಕೃತಿಯನ್ನು ತಿಳಿಯುವಲ್ಲಿ ಶಾಸನಗಳು, ದೇವಾಲಯಗಳು ಪ್ರಮುಖ ಆಕರಗಳಾಗಿವೆ ಎಂದು ಮೇಲೆ ಹೇಳಲಾಗಿದೆ. ಇವುಗಳು ಕಲೆಗೆ ದೊರೆತ ಪ್ರೋತ್ಸಾಹವನ್ನು, ಕಲಾಶೈಲಿಯನ್ನು ಹಾಗೂ ಧಾರ್ಮಿಕ ಸ್ಥಿತಿಯನ್ನು ತಿಳಿಸುವಲ್ಲಿ ಮಹತ್ವದ ಪಾತ್ರವಹಿಸಿವೆ. ಈ ಹಿನ್ನಲೆಯಲ್ಲಿ ಕ್ಷೇತ್ರಕಾರ್ಯ ಮಾಡಿ ಪ್ರಕಟಿತ ಮತ್ತು ಅಪ್ರಕಟಿತ ಮಾಹಿತಿಗಳೊಂದಿಗೆ ಮಾಡಿದ ಪ್ರಯತ್ನ ಇದಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ಭೂ ಭೌಗೋಳಿಕ ಪರಿಸರ, ಇಲ್ಲಿ ನಡೆದ ಪೂರ್ವಾಧ್ಯಯಗಳ ಸಮಿಕ್ಷೆ, ಅಧ್ಯಯನದ ವಿಧಿ ವಿಧಾನವನ್ನು ಹೇಳಲಾಗಿದೆ. ಅಧ್ಯಯನ ಮಾಡಬೇಕಾದ ಆಕರಗಳು, ಸಾಹಿತ್ಯಿಕ ಪುರಾತತ್ವ ಆಕರಗಳನ್ನು ಒಂದೆಡೆ ಸೆರೆ ಹಿಡಿದು, ಆಕರಗಳ ಪರಿಚಯವನ್ನು ಇಲ್ಲಿ ಹೇಳಲಾಗಿದ್ದು ಅಧ್ಯಯನದ ಅವಶ್ಯಕತೆಯನ್ನು ಮಾಡಲಾಗಿದೆ. ಈ ಪರಿಸರದಲ್ಲಿ ಕಂಡುಬಂದ ದೇವಾಲಯಗಳ, ಶಾಸನಗಳ ಮತ್ತು ಮೂರ್ತಿಶಿಲ್ಪಗಳ ಮಜಲುಗಳನ್ನು ಗುರುತಿಸಿ ಸಂಸ್ಕೃತಿಯ ವಿವಿಧ ಮುಖಗಳನ್ನು ಪರಿಚಯಿಸುವುದು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಅಧ್ಯಾಯ ಎರಡು ಶಾಸನಗಳ ಆಧಾರಿತ ಐತಿಹಾಸಿಕ ಹಿನ್ನೆಲೆಯಾಗಿದೆ. ಈ ಅಧ್ಯಾಯದಲ್ಲಿ ಕುರುಗೋಡು ಪರಿಸರದ ರಾಜಕೀಯ ವ್ಯವಸ್ಥೆ, ಸಾಮಾಜಿಕ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ ಮತ್ತು ಧಾರ್ಮಿಕ ವ್ಯವಸ್ಥೆ ಕುರಿತು ಹೇಳಲಾಗಿದೆ. ಧಾರ್ಮಿಕ ವ್ಯವಸ್ಥೆಯನ್ನು ಕುರಿತು ಚರ್ಚಿಸುವಾಗ ಒಟ್ಟಾರೆ ಇಲ್ಲಿ ದೊರೆತ ಪ್ರಾಚ್ಯ ವಸ್ತುಗಳ ಆಧಾರವನ್ನು ಮುಖ್ಯವಾಗಿ ಪರಿಗಣನೆಗೆ ತೆಗೆದುಕೊಂಡಾಗ ಶೈವಧರ್ಮ ಹೆಚ್ಚು ಮುಂಚೂಣಿಯಲ್ಲಿ ಇತ್ತೆಂಬುದು ಸ್ಪಷ್ಟವಾಗಿದೆ. ಕೃಷಿ ಪದ್ಧತಿಯನ್ನು ಹೇಳುವಾಗ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ೧೮ ಗೇಣು ಕೋಲು ಒಂದು ಮಾಪನವಾಗಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಇಲ್ಲಿ ಪೊನ್ನಿನ ಬಳಕೆ ಇತ್ತೆಂಬುದು ಸ್ಪಷ್ಟವಾಗುತ್ತದೆ. ಒಟ್ಟಾರೆ ಈ ಪರಿಸರದಲ್ಲಿ ಕಂಡುಬಂದ ಪ್ರಾಚ್ಯ ವಸ್ತುಗಳ ಆಧಾರಿತ ಐತಿಹಾಸಿಕ ಹಿನ್ನೆಲೆ ಈ ಅಧ್ಯಯನವಾಗಿದೆ.

ಅಧ್ಯಾಯ ಮೂರರಲ್ಲಿ ಶಾಸನಗಳ ವೈವಿಧ್ಯತೆಯ ಬಗ್ಗೆ ಚರ್ಚಿಸಲಾಗಿದೆ. ಅಂದರೆ ಕುರುಗೋಡು, ಓರುವಾಯಿ, ಕೋಳೂರು ಮತ್ತು ಮೋಕಾದ ಶಾಸನಗಳಲ್ಲಿ ದಾನಶಾಸನ, ವೀರಗಲ್ಲು ಶಾಸನ ಮತ್ತು ಮಾಸ್ತಿಗಲ್ಲು ಹೀಗೆ ವೈವಿತ್ಯತೆಯ ಶಾಸಗಳಿವೆ. ಹೆಚ್ಚಿನ ಮಟ್ಟಿಗೆ ಇಲ್ಲಿನ ಶಾಸನಗಳು ಕಲ್ಯಾಣ ಚಾಲುಕ್ಯರ ಮತ್ತು ವಿಜಯನಗರ ದೊರೆಗಳ ಕಾಲಕ್ಕೆ ಸೇರಿದವುಗಳಾಗಿವೆ. ಇಲ್ಲಿನ ಸ್ಮಾರಕ ಶಾಸನಗಳು ಅಂದಿನ ಸಾಮಾಜಿಕ, ಧಾರ್ಮಿಕ ಪರಂಪರೆಯನ್ನು ಬಿಂಬಿಸಿವೆ. ದೊರೆತ ಶಾಸನಗಳಲ್ಲಿ ಬಹಳಷ್ಟು ಶಾಸನಗಳು ದಾನಶಾಸನಗಳಾಗಿವೆ. ಕುರುಗೋಡಿನ ಮುಪ್ಪಗಟ್ಟಿ ರಸ್ತೆಯಲ್ಲಿರುವ ಸಂಗಮೇಶ್ವರ ದೇವಸ್ಥಾನದಲ್ಲಿ ಒಂದು ಮಾಸ್ತಿ ಶಾಸನ ಇದೆ. ಇದು ಸಿಂದವಂಶದ ಬೇಚರಸ ತೀರಿಕೊಂಡಾಗ ಅವನೊಡನೆ ಅವನ ಮಡದಿಯಾದ ಬೈಳಿಯಕ್ಕ ಹಾಗೂ ಮಳ್ಹಾಣಿಯಕ್ಕ ಅಗ್ನಿಗೆ ಆತ್ಮಾರ್ಪಣೆ ಮಾಡಿಕೊಂಡ ಉಲ್ಲೇಖವಿದ್ದು, ಮಹಾಸತಿ ಪರಂಪರೆಗೆ ಉದಾಹರಣೆಯಾಗಿದೆ. ಇದರಿಂದ ಕುರುಗೋಡು ಪ್ರದೇಶದಲ್ಲಿ ಮಹಾಸತಿ ಆಚರಣೆಗಳು ಇರುವುದನ್ನು ಈ ಮೇಲಿನ ಶಾಸನಗಳಿಂದ ನಮಗೆ ಸ್ಪಷ್ಟವಾಗಿ ಗೋಚರವಾಗುತ್ತದೆ. ಅದೇ ರೀತಿಯಾಗಿ ಕುರುಗೋಡು

ಗ್ರಾಮದ ಮುಷ್ಟುಗಟ್ಟೆ ರಸ್ತೆಯಲ್ಲಿರುವ ಉಂಡಲಿ ಸಂಗಮೇಶ್ವರ ದೇವಸ್ಥಾನದಲ್ಲಿ ಒಂದು ವೀರಶಾಸನ ಇದೆ. ಸಿಂದ ವಂಶದ ದೊರೆ ಬೇಚರಸ ಶತೃಗಳ ವಿರುದ್ಧ ಯುದ್ಧದಲ್ಲಿ ಹೋರಾಡುವ ದೃಶ್ಯವನ್ನು ಹೊಂದಿದ ಶಾಸನ ಇದೆ. ಇದರಿಂದ ಕುರುಗೋಡು ಪರಿಸರದಲ್ಲಿ ವೀರರ ಸವಿನೆನಪಿಗಾಗಿ ಶಾಸನಗಳನ್ನು ನಿಲ್ಲಿಸುತ್ತಿದ್ದರೆಂಬುದನ್ನು ಅಲ್ಲಿನ ಮತ್ತು ಅಂದಿನ ಈ ಮೇಲಿನ ಶಾಸನಗಳು ಪ್ರತಿಬಿಂಬಿಸುತ್ತಿವೆ.

ಅಧ್ಯಾಯ ನಾಲ್ಕರಲ್ಲಿ ಕುರುಗೋಡು ಪರಿಸರ ಅಂದರೆ ಕುರುಗೋಡು, ಓರುವಾಯಿ, ಕೋಳೂರು ಮತ್ತು ಮೋಕಾಗಳ ದೇವಾಲಯಗಳ ವಾಸ್ತು ಕಲೆಗೆ ಸಂಬಂಧಿಸಿದಂತೆ ತಿಳಿಸಲಾಗಿದೆ. ಕುರುಗೋಡು ಪರಿಸರದಲ್ಲಿನ ದೇವಾಲಯಗಳು ಕಲ್ಯಾಣ ಚಾಲುಕ್ಯ ಮತ್ತು ವಿಜಯನಗರ ದೊರೆಗಳ ಕಾಲಕ್ಕೆ ಸೇರಿದವುಗಳಾಗಿವೆ. ಎತ್ತರವಾದ ಅಧಿಷ್ಠಾನವನ್ನು ಹೊಂದಿದ್ದು, ಅಧಿಷ್ಠಾನದ ಮೇಲ್ಭಾಗದಲ್ಲಿ ಕಪೋತ ಭಾಗ ಸಾಮಾನ್ಯ ಲಕ್ಷಣವಾಗಿದೆ. ಇಲ್ಲಿ ಚಿಕ್ಕ ಆಕಾರ ದೇವಾಲಯಗಳಲ್ಲಿ ಭಿತ್ತಿಗಳು ಸರಳವಾಗಿದ್ದರೆ ದೊಡ್ಡ ದೇವಾಲಯಗಳ ಭಿತ್ತಿಗಳು ಅಲಂಕೃತವಾಗಿರುತ್ತವೆ. ಅಂದರೆ ಭಿತ್ತಿಗಳಲ್ಲಿ ಹಲವಾರು ಮೂರ್ತಿಶಿಲ್ಪಗಳು ಕೆತ್ತಲ್ಪಟ್ಟಿರುತ್ತದೆ. ಒಟ್ಟಾರೆ ಕಲ್ಯಾಣಮಂಟಪ, ಮೂರ್ತಿಶಿಲ್ಪಗಳು, ಗೋಪುರಗಳು, ಇಟ್ಟಿಗೆಯನ್ನು ಶಿಖರಕ್ಕೆ ಬಳಸಿರುವುದು. ಇವೆಲ್ಲವೂ ಕುರುಗೋಡು ಪರಿಸರದ ದೇವಾಲಯಗಳಲ್ಲಿ ಕಂಡುಬಂದ ವೈಶಿಷ್ಟತೆಗಳಾಗಿವೆ. ಇಲ್ಲಿ ಶೈವ ಪಂಥ, ವೈಷ್ಣವ ಪಂಥ ಮತ್ತು ಜೈನ ಪಂಥಕ್ಕೆ ಸೇರಿದ ದೇವಾಲಯಗಳಿವೆ. ತುಲನಾತ್ಮಕ ಅಧ್ಯಯನ ಮಾಡಿ ನೋಡಿದರೆ ಕುರುಗೋಡು ಪರಿಸರದಲ್ಲಿ ಶೈವ ಪಂಥಕ್ಕೆ ಸೇರಿದ ದೇವಾಲಯಗಳು ಹೆಚ್ಚಾಗಿವೆ. ಆದರೂ ಉಳಿದ ಧರ್ಮವನ್ನು ಕಡೆಗಣಿಸಿರಲಿಲ್ಲ. ಉದಾಹರಣೆಗಾಗಿ ಕುರುಗೋಡು ಗ್ರಾಮದ ಪಶ್ಚಿಮಕ್ಕೆ ೧೨ನೆಯ ಶತಮಾನದಲ್ಲಿ ನಿರ್ಮಾಣವಾದ ಏಕೈಕ ಜೈನ ಬಸದಿಯೂ ಇಲ್ಲಿದೆ. ಸಿಂದರ ದೊರೆಗಳು ತಮ್ಮ ಆಳ್ವಿಕೆಯ ಕಾಲದಲ್ಲಿ ಧಾರ್ಮಿಕ ಸಮನ್ವತೆಯನ್ನು ಕಾಪಾಡಿಕೊಂಡು ಬಂದಿದ್ದರು ಎಂಬುದನ್ನು ಇದರಿಂದ ಸ್ಪಷ್ಟವಾಗಿದೆ. ದೇವಾಲಯಗಳು ಆಡಳಿತ ಕೇಂದ್ರವಾಗಿ, ನೌಕರಿ ಕೊಡುವ ಸ್ಥಾನವಾಗಿ, ಶೈಕ್ಷಣಿಕ ಕೇಂದ್ರವಾಗಿ, ಮಠವಾಗಿ, ವಾಸಸ್ಥಾನವಾಗಿ, ಆಹಾರ ಛತ್ರವಾಗಿ ಮತ್ತು ನ್ಯಾಯಲಯದ ಕೇಂದ್ರವಾಗಿ ಹೆಚ್ಚು ಮಹತ್ವ ಪಡೆದಿವೆ ಎಂಬುದರ ಪ್ರಸ್ತಾವನೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಅಧ್ಯಾಯ ಐದರಲ್ಲಿ ಮೂರ್ತಿಶಿಲ್ಪಗಳ ಕುರಿತಾಗಿವೆ. ಮೂರ್ತಿ ಶಿಲ್ಪಗಳು ಗಾಣಪತ್ಯ, ಶಾಕ್ತ, ವೈಷ್ಣವ, ಶೈವ, ಜೈನ ಪಂಥಕ್ಕೆ ಸೇರಿದವುಗಳಾಗಿವೆ. ಮೂರ್ತಿಶಿಲ್ಪಗಳು ಅಂದಿನ ಧಾರ್ಮಿಕ ಪರಂಪರೆಯನ್ನು ಬಿಂಬಿಸುತ್ತವೆ. ಕುರುಗೋಡು ಪ್ರದೇಶದಲ್ಲಿ ಮೂರ್ತಿಶಿಲ್ಪಗಳಲ್ಲೂ ವೈವಿಧ್ಯಯನ್ನು ಕಾಣಬಹುದು. ಗಾಣಪತ್ಯ, ಶಾಕ್ತಮೂರ್ತಿಗಳು, ಸಪ್ತ ಮಾತೃಕೆಯರು ಕಾಳಾಮ್ಮ,

ಗಜಲಕ್ಷ್ಮಿ, ವೈಷ್ಣವ ಶಿಲ್ಪಗಳಾದ ನಾರಾಯಣ, ಶ್ರೀಕೃಷ್ಣ, ಆಂಜನೇಯ ಹೀಗೆ ಶಿಲ್ಪ ಮೂರ್ತಿಗಳಲ್ಲಿ ವೈವಿಧ್ಯತೆಯನ್ನು ಕಂಡರೂ "ಏಕಂ ಸತ್ ವಿಪ್ರಃ ಬಹುಧಾ ವದಂತಿ" ನಾಮ ಹಲವು ಶಕ್ತಿ ಒಂದು ಎಂಬುದನ್ನು ಈ ಮೂರ್ತಿ ಶಿಲ್ಪಗಳಿಂದ ತಿಳಿಯುವಂತಾಗಿದೆ. ಕುರುಗೋಡಿನ ಸಿದ್ಧೇಶ್ವರ ದೇವಾಲಯದ ಸಮೀಪ ಮಾತ್ರ ಒಂದು ತೀರ್ಥಂಕರ ಮೂರ್ತಿಶಿಲ್ಪವು ಇಲ್ಲಿ ಕಂಡುಬಂದಿರುವುದರಿಂದ ಇಲ್ಲಿ ಜೈನ ಧರ್ಮವು ಅಸ್ತಿತ್ವದಲ್ಲಿತ್ತೆಂಬುದು ಸ್ಪಷ್ಟವಾಗಿದೆ. ಹೀಗಾಗಿ ಪ್ರಸ್ತುತ ಕಿರು ಪ್ರಬಂಧದಲ್ಲಿ ಕುರುಗೋಡು ಪರಿಸರದಲ್ಲಿ ದೊರೆತ ಶಿಲ್ಪಮೂರ್ತಿಗಳ ವೈಶಿಷ್ಟ್ಯತೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಒಟ್ಟಾರೆ ಇಲ್ಲಿ ದೊರೆತ ಶಾಸನಗಳಿಂದ ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳು ಇಲ್ಲಿ ಸಾಂಸ್ಕೃತಿಕ ಮಜಲುಗಳನ್ನು ತಿಳಿಯಲು ಪೂರಕವಾದ ಆಕರಗಳಾಗಿವೆ. ಇಲ್ಲಿ ಪ್ರಾಚ್ಯವಸ್ತುಗಳು ಸಂಶೋಧಕರನ್ನು ಕೈಬೀಸಿ ಕರೆಯುತ್ತಲಿವೆ. ಹೀಗೆ ಕುರುಗೋಡು ಪರಿಸರದ ಶಾಸನಗಳು, ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳು ಪ್ರಾದೇಶಿಕವಾಗಿ ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದ ವಿವಿಧ ಮುಖಗಳ ಅಧ್ಯಯನಕ್ಕೆ ಕೊಡುಗೆ ಸಲ್ಲಿಸಿವೆ. ಹಿನ್ನೆಲೆಯಲ್ಲಿ ಶ್ರೀ ಸಾಮಾನ್ಯ ಇದರ ಅರಿವು ಮೂಡಿಸುವುದರಲ್ಲಿ ಇಲ್ಲಿನ ಪ್ರಾಚೀನ, ಮಧ್ಯಕಾಲೀನ ಇತಿಹಾಸವನ್ನು ರಕ್ಷಣೆ ಮಾಡಿದಂತೆ ಆಗುತ್ತದೆ.

ಹೊಸ ಚಿಗುರು ಹೂ-ಹಣ್ಣುಗಳನ್ನು ಅರಳಿಸುತ್ತಾ ಆಯಾ ಯುಗದ ಅವಶ್ಯಕತೆಗೆ ಅನುಗುಣವಾಗಿ ಹೊಸದನ್ನು ಅಳವಡಿಸಿಕೊಳ್ಳಲು ಅಕ್ಷರ ಶಕ್ತಿಯನ್ನು ವೃದ್ಧಿಸುತ್ತವೆ. "ಬೆಲ್ಲದ ಸಿಹಿ ಸವಿದವನೇ ಬಲ್ಲ" ಎಂಬ ನಾಣ್ನುಡಿಯಂತೆ ಇದರ ಅಧ್ಯಯನ ಮಾಡತೊಡಗಿದರೆ ಇದರ ಸತ್ವದ ಬೆಳಕಿನ ಮಹತ್ವದ ಅರಿವಾಗುತ್ತದೆ. "ತಳದಲ್ಲಿ ನೀರೆದರೆ ಮೇಲೆ ಪಲ್ಲವಿಸುತ್ತಾ ನೋಡಾ" ಎಂಬ ಜಾನಪದ ಕಾವ್ಯದಂತೆ ತಳದಲ್ಲಿರುವ ತಾಯಿಬೇರಿನ ಸತ್ವದಿಂದ ಆ ಸತ್ಯವನ್ನು ಕಂಡುಕೊಳ್ಳುವ ಪ್ರಯತ್ನ ಇದಾಗಿದೆ.

# ಅನುಬಂಧಗಳು

೧. ಆಕರ ಗ್ರಂಥಗಳು

೨. ಸಂಕೇತ ಸೂಚಿಗಳು

೩. ಕುರುಗೋಡಿನ ನಕಾಶೆ

೪. ಛಾಯಚಿತ್ರಗಳು

## ಆಕರಗ್ರಂಥಗಳು


೦೧. ಅಭಿಶಂಕರ ಬಿ, ೧೯೭೯, ಬಳ್ಳಾರಿ ಡಿಸ್ಟ್ರಿಕ್ಟ್ ಗ್ಯಾಸಿಟಿಯರ್

೦೨. ಭಟಸೂರಿ ಕೆ.ಜಿ., ೧೯೯೬, ಗೇರುಸೊಪ್ಪೆಯ ಜೈನವಾಸ್ತು ಮತ್ತು ಮೂರ್ತಿಶಿಲ್ಪ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೩. ಬಾಲಸುಬ್ರಹ್ಮಣ್ಯ, ೨೦೧೦, ಕುರುಗೋಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೪. ಚನ್ನಬಸವಯ್ಯ ಹಿರೇಮಠ, ೧೯೯೫, ಕುರುಗೋಡು ಸಿಂದರು ಒಂದು ಅಧ್ಯಯನ, ಸಂಗಣ್ಣನವರು ಅಗಡಿ ಪ್ರತಿಷ್ಠಾನ, ಕೊಪ್ಪಳ.

೦೫. ಚನ್ನಬಸವಯ್ಯ ಹಿರೇಮಠ, ೧೯೯೮, ಪೂರ್ವೋಕ್ತ.

೦೬. ಚಿದಾನಂದಮೂರ್ತಿ ಎಂ., ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೦೭. ಚಿದಾನಂದಮೂರ್ತಿ ಎಂ., ೧೯೬೪, ವೀರಗಲ್ಲು ಮತ್ತು ಮಾಸ್ತಿಗಲ್ಲುಗಳು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೦೮. ದತ್ತಾತ್ರೇಯ ಜಿ., ೨೦೦೯, ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳ ಅಪ್ರಕಟಿತ ಪ್ರಬಂಧ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೯. ಹನುಮಂತರೆಡ್ಡಿ ವೈ., ೧೯೯೧, ಕುರುಗೋಡು ಕ್ಷೇತ್ರದರ್ಶನ, ಜ್ಞಾನವಾಹಿನಿ ಪ್ರಕಾಶನ, ಕುರುಗೋಡು.

೧೦. ಕಲಬುರ್ಗಿ ಎಂ.ಎಂ., ೧೯೭೦, ಶಾಸನಗಳಲ್ಲಿ ಶಿವಶರಣರು, ಧಾರವಾಡ.

೧೧. ಮಹಾದೇವ ಸಿ, ೨೦೦೯, ಧಾರವಾಡ ಜಿಲ್ಲೆಯ ದೇವಾಲಯ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨. ಮಹಾಂತೇಶ ಎನ್.ಎಸ್., ೨೦೧೬, ಧಾರವಾಡ ಜಿಲ್ಲೆಯ ದೇವಾಲಯ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ನರಸಿಂಹ ಡಬ್ಲ್ಯೂ.ವಿ.ಎಸ್., ೧೯೯೮, ರಾಶಿ ಸಮ್ಮೇಳನದಲ್ಲಿ ಮಂಡಿಸಿದ ಕುರುಗೋಡು ಕಲೆಗೆ ಸಂಬಂಧಿಸಿದ ಪ್ರಬಂಧ

೧೪. ನರಸಿಂಹಮೂರ್ತಿ ಎ.ವಿ., ೧೯೭೨, ಕರ್ನಾಟಕದ ಶಾಸನದ ಸಂಪತ್ತು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೫. ನರಸಿಂಹಮೂರ್ತಿ ಎ.ವಿ, ೧೯೭೩, ಕರ್ನಾಟಕ ಶಾಸನದ ಸಂಪತ್ತು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೬. ಪರಮಶಿವಮೂರ್ತಿ ಡಿ.ವಿ, ೧೯೯೯, ಕನ್ನಡ ಶಾಸನ ಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ಪ್ರಭಾಕರ್ ಎಂ.ಎನ್., ೨೦೦೦, ದೇವಾಲಯಗಳ ವಾಸ್ತುಚಂದ್ರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮. ರಮೇಶ ಕೆ.ವಿ, ೧೯೯೪, 'ಶಾಸನಗಳು ಮತ್ತು ಭಾರತೀಯ ಸಂಸ್ಕೃತಿ' ಗುಡಿ ಜನರ ಜೀವನಾಡಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೯. ರಾಮಚಂದ್ರರಾವ್ ಎಸ್.ಕೆ, ೧೯೯೪, ಗುಡಿಜನರ ಜೀವನಾಡಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೦. ರಾಜಶೇಖರ್ ಎಸ್., ೧೯೮೮, ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಸುಜಾತ ಪಬ್ಲಿಕೇಷನ್ಸ್, ಧಾರವಾಡ.

೨೧. ರಾಮಚಂದ್ರರಾವ್ ಎಸ್.ಕೆ, ೧೯೭೫, ಮೂರ್ತಿಶಿಲ್ಪ ನೆಲೆ–ಹಿನ್ನೆಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೨. ಶೀಲಾಕಾಂತ ಪತ್ತಾರ್, ೨೦೦೦, ಬಾದಾಮಿಯ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೩. ಶೆಟ್ಟಿ ಎಸ್.ಡಿ., ೧೯೯೯, ಜೈನಬಸದಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ಶೇಷಶಾಸ್ತ್ರೀ ಆರ್., ೨೦೦೫, ಶಾಸನ ಪರಿಚಯ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೫. ಶೇಷಶಾಸ್ತ್ರೀ ಆರ್, ೨೦೦೪, ಕರ್ನಾಟಕದ ವೀರಗಲ್ಲು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೨೬. ಶೇಷಶಾಸ್ತ್ರೀ ಆರ್., ೧೯೮೨, ಕರ್ನಾಟಕದ ವೀರಗಲ್ಲುಗಳು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೭. ಸಂದರ್ಶನ ವರದಿ, ೨೦೧೦, ನಾಡಕಛೇರಿ, ಕುರಗೋಡು.

೨೮. ಸುರೇಶ ಕೆ.ಎಂ., ೧೯೯೯, ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ಸುಂದರ ಅ., ೧೯೯೪, ದೇವಾಲಯ ಮೂರ್ತಿಶಿಲ್ಪ ಚೈತ್ಯಾಲಯ ಒಂದು ವಿಶ್ಲೇಷಣೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩೦. ಉಮಾಪತಿ ಜಿ.ಎಂ., ೧೯೭೬, ಐತಿಹಾಸಿಕ ಕುರುಗೋಡು, ಸುಕುಮಾರ ಮುದ್ರಣಾಲಯ, ಬಾಗಲಕೋಟೆ.

## ಆಂಗ್ಲಭಾಷೆಯ ಗ್ರಂಥಋಣ

1. Ajith Prasad, 1996, **Jainism in Dharawad Region** (unpblished Ph.D. Thesis) Department of Ancient Indian History and Epigraphy.

2. Cousens Henry, 1926, **Chalukyas Architecture of the Kanerese** District. Calcutta

3. Dhaky M.A., 1997, **Indian Temple forms in Karnataka (Inscription and Architecture)** Abhinava Publication, Delhi.

4. Desai P.B., 1957, **Jainism in South India and Some Jain Epigraphs,** Kolhapur.

5. Foot R.B., 1916, **The Foot Collection of the Indian Pre-Historic and Proto historic Antiquities Notes on their ages and Distribution.**

6. Gopal. B.R., 1981, **The Chalukyas of Kalyana and the Kalachuris,** Dharawad.

7. Krishnamurthy M.S., 1977, **Kurugodu and Archeological Note Archeological Studies,** Mysore University, Mysore.

8. Robert Sewell, 1983, **The Historical inscripton of Southern India,** New Delhi.

**ಶಾಸನ ಸಂಪುಟಗಳು**

1. Annual Report of the Mysore Archeological Deapartment

2. Annual Report on South Indian Epigraphy Vol, ix-I, 1136, 1147, 1149, 1176, 1177, 1189, 1195.

3. Epigraphia Indica Vol, xiv.

4. Epigraphia Carnatica

5. Indian Anthiquary, Vol, XVIII

6. Karnataka Inscriptions, Vol-1, 1996.

**ಸಂಕೇತ ಸೂಚಿ**

೦೧. ಎ.ಆರ್.ಎಸ್.ಇ.ಇ. – ಎನ್ಯುವಲ್ ರಿಪೋರ್ಟ್ಸ್ ಆನ್ ಸೌಥ ಇಂಡಿಯನ್ ಎಫಿಗ್ರಾಫಿ.

೦೨. ಇ.ಕ. – ಎಫಿಗ್ರಫಿಯಾ ಕರ್ನಾಟಕ.

೦೩. ಇ.ಆಯ್. – ಎಫಿಗ್ರಫಿಯಾ ಇಂಡಿಕಾ.

೦೪. ಕವಿವಿ – ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೫. ಕ್ರಿ.ಶ.ಸು – ಕ್ರಿಸ್ತಶಕ ಸುಮಾರು

೦೬. ಕೆ.ಆಯ್. – ಕರ್ನಾಟಕ ಇನ್ಸ್ಕ್ರಿಪ್‌ಶನ್.

೦೭. ಪೂರ್ವೋಕ್ತ – ಈ ಮೊದಲು ಉಲ್ಲೇಖದ ಕೃತಿ.

೦೮. ಶಾ.ಸಂ. – ಶಾಸನ ಸಂಖ್ಯೆ.

೦೯. ಸಂ – ಸಂಪುಟ, ಸಂಚಿಕೆ, ಸಂಪಾದಕರು

# ಬಳ್ಳಾರಿ ಜಿಲ್ಲೆ ನಕಾಶೆ



# MAP OF KURUGODU REGION



## ದೇವಾಲಯಗಳ ಛಾಯಾಚಿತ್ರಗಳು

೦೧. ಕುರುಗೋಡು – ಸಂಗಮೇಶ್ವರ ದೇವಾಲಯ – ಸಾಮಾನ್ಯ ನೋಟ

೦೨. ಕುರುಗೋಡು – ಸಂಗಮೇಶ್ವರ ದೇವಾಲಯ – ಮುಂಭಾಗದ ನೋಟ

೦೩. ಕುರುಗೋಡು – ಸಂಗಮೇಶ್ವರ ದೇವಾಲಯ – ಭಿತ್ತಿ, ಅಧಿಷ್ಠಾನ, ಮಂಟಪ ಮತ್ತು ಶಿಖರ

೦೪. ಕುರುಗೋಡು – ಸಂಗಮೇಶ್ವರ ದೇವಾಲಯ – ಸಭಾಮಂಟಪ

೦೫. ಕುರುಗೋಡು – ತ್ರೈಪುರುಷ ದೇವಾಲಯ – ಸಾಮಾನ್ಯ ನೋಟ

೦೬. ಕುರುಗೋಡು – ತ್ರೈಪುರುಷ ದೇವಾಲಯ – ಸಭಾಮಂಟಪ

೦೭. ಕುರುಗೋಡು – ತ್ರೈಪುರುಷ ದೇವಾಲಯ – ಮುಂಭಾಗದ ನೋಟ

೦೮. ಕುರುಗೋಡು – ಉಜಾಳೇಶ್ವರ ದೇವಾಲಯ – ಸಾಮಾನ್ಯ ನೋಟ

೦೯. ಕುರುಗೋಡು – ಉಜಾಳೇಶ್ವರ ದೇವಾಲಯ – ಮುಂಭಾಗದ ನೋಟ

೧೦. ಕುರುಗೋಡು – ಮಲ್ಲಿಕಾರ್ಜುನ ದೇವಾಲಯ – ಸಾಮಾನ್ಯ ನೋಟ

೧೧. ಕುರುಗೋಡು – ಮಲ್ಲಿಕಾರ್ಜುನ ದೇವಾಲಯ – ಮುಂಭಾಗದ ನೋಟ

೧೨. ಕುರುಗೋಡು – ಕಲ್ಲೇಶ್ವರ ದೇವಾಲಯ – ಸಾಮಾನ್ಯ ನೋಟ

೧೩. ಕೋಳೂರು – ಸೂರ್ಯನಾರಾಯಣ ದೇವಾಲಯ – ಸಾಮಾನ್ಯ ನೋಟ

೧೪. ಕುರುಗೋಡು – ಈಶ್ವರ ದೇವಾಲಯ – ಸಾಮಾನ್ಯ ನೋಟ

೧೫. ಕುರುಗೋಡು – ಪಾಳುಬಿದ್ದ ಈಶ್ವರ ದೇವಾಲಯ – ಸಾಮಾನ್ಯ ನೋಟ

೧೬. ಕುರುಗೋಡು – ದೊಡ್ಡಬಸವೇಶ್ವರ ದೇವಾಲಯದ ಶಿಖರ

೧೭. ಕುರುಗೋಡು – ದೊಡ್ಡಬಸವೇಶ್ವರ ದೇವಾಲಯ – ಮುಂಭಾಗದ ನೋಟ

೧೮. ಕುರುಗೋಡು – ವೀರಭದ್ರ ದೇವಾಲಯ – ಸಾಮಾನ್ಯ ನೋಟ

೧೯. ಕುರುಗೋಡು – ವೀರಭದ್ರ ದೇವಾಲಯ – ಸಭಾಮಂಟಪ

೨೦. ಕೋಳೂರು – ರಾಮಲಿಂಗೇಶ್ವರ ದೇವಾಲಯ – ಮುಂಭಾಗದ ನೋಟ

೨೧. ಕೋಳೂರು – ರಾಮಲಿಂಗೇಶ್ವರ ದೇವಾಲಯ – ಸಭಾಮಂಟಪ

೨೨. ಮೋಕಾ – ಬಸವೇಶ್ವರ ದೇವಾಲಯ – ಮುಂಭಾಗದ ನೋಟ

೨೩. ಮೋಕಾ – ಬಸವೇಶ್ವರ ದೇವಾಲಯ – ಗರ್ಭಗುಡಿ



ಕುರುಗೋಡು- ಸಂಗಮೇಶ್ವರ ದೇವಾಲಯ- ಸಾಮಾನ್ಯ ನೋಟ



ಕುರುಗೋಡು- ಸಂಗಮೇಶ್ವರ ದೇವಾಲಯ- ಮುಂಭಾಗದ ನೋಟ

ಕುರುಗೋಡು- ಸಂಗಮೇಶ್ವರ ದೇವಾಲಯ- ಬಿತ್ತಿ, ಅದಿಷ್ಠಾನ, ಮಂಟಪ ಮತ್ತು ಶಿಖರ



ಕುರುಗೋಡು- ಸಂಗಮೇಶ್ವರ ದೇವಾಲಯ- ಸಭಾಮಂಟಪ



ಕುರುಗೋಡು- ತ್ರೈಪುರುಷ ದೇವಾಲಯ- ಸಾಮಾನ್ಯ ನೋಟ



ಕುರುಗೋಡು- ತ್ರೈಪುರುಷ ದೇವಾಲಯ- ಸಭಾಮಂಟಪ



ಕುರುಗೋಡು- ತ್ರೈಪುರುಷ ದೇವಾಲಯ- ಮುಂಭಾಗದ ನೋಟ



ಕುರುಗೋಡು- ಉಜಾಳೇಶ್ವರ ದೇವಾಲಯ- ಸಾಮಾನ್ಯ ನೋಟ



ಕುರುಗೋಡು- ಉಜಾಳೇಶ್ವರ ದೇವಾಲಯ- ಮುಂಭಾಗದ ನೋಟ



ಕುರುಗೋಡು- ಮಲ್ಲಿಕಾರ್ಜುನ ದೇವಾಲಯ- ಸಾಮಾನ್ಯ ನೋಟ



ಕುರುಗೋಡು- ಮಲ್ಲಿಕಾರ್ಜುನ ದೇವಾಲಯ- ಮುಂಭಾಗದ ನೋಟ



ಕುರುಗೋಡು- ಕಲ್ಲೇಶ್ವರ ದೇವಾಲಯ- ಸಾಮಾನ್ಯ ನೋಟ



ಕೋಳೂರು- ಸೂರ್ಯನಾರಾಯಣದೇವಾಲಯ- ಸಾಮಾನ್ಯ ನೋಟ



ಕುರುಗೋಡು- ಈಶ್ವರ ದೇವಾಲಯ- ಸಾಮಾನ್ಯ ನೋಟ



ಕುರುಗೋಡು- ಪಾಳುಬಿದ್ದ ಈಶ್ವರ ದೇವಾಲಯ- ಸಾಮಾನ್ಯ ನೋಟ




ಕುರುಗೋಡು- ದೊಡ್ಡಬಸವೇಶ್ವರ ದೇವಾಲಯದ ಶಿಖರ



ಕುರುಗೋಡು- ದೊಡ್ಡಬಸವೇಶ್ವರ ದೇವಾಲಯ- ಮುಂಭಾಗದ ನೋಟ



ಕುರುಗೋಡು- ವೀರಭದ್ರ ದೇವಾಲಯ- ಸಾಮಾನ್ಯ ನೋಟ



ಕುರುಗೋಡು- ವೀರಭದ್ರ ದೇವಾಲಯ- ಸಭಾಮಂಟಪ




ಕೋಳೂರು- ರಾಮಲಿಂಗೇಶ್ವರ ದೇವಾಲಯ- ಮುಂಭಾಗದ ನೋಟ



ಕೋಳೂರು- ರಾಮಲಿಂಗೇಶ್ವರ ದೇವಾಲಯ- ಸಭಾಮಂಟಪ



ಮೋಕಾ- ಬಸವೇಶ್ವರ ದೇವಾಲಯ- ಮುಂಭಾಗದ ನೋಟ



ಮೋಕಾ- ಬಸವೇಶ್ವರ ದೇವಾಲಯ- ಗರ್ಭಗುಡಿ

## ಮೂರ್ತಿಶಿಲ್ಪಗಳ ಛಾಯಾಚಿತ್ರಗಳು

೦೧. ಕುರುಗೋಡು – ವೀರಭದ್ರ ದೇವಾಲಯ – ವೀರಭದ್ರ

೦೨. ಕುರುಗೋಡು – ದೊಡ್ಡಬಸವೇಶ್ವರ ದೇವಾಲಯ – ನಂದಿ

೦೩. ಕೋಳೂರು – ಸೂರ್ಯನಾರಾಯಣ ದೇವಾಲಯ – ಭೈರವ

೦೪. ಓರುವಾಯಿ – ಗಣೇಶ ದೇವಾಲಯ – ಗಣೇಶ

೦೫. ಕುರುಗೋಡು – ಗಣೇಶ

೦೬. ಕುರುಗೋಡು – ಸುಂಕ್ಲಮ್ಮ ದೇವಾಲಯ – ಸುಂಕ್ಲಮ್ಮ

೦೭. ಕುರುಗೋಡು – ಕಾಳಮ್ಮ ದೇವಾಲಯ – ಕಾಳಿ

೦೮. ಕೋಳೂರು – ಸೂರ್ಯನಾರಾಯಣ ದೇವಾಲಯ – ನಾರಾಯಣ

೦೯. ಕುರುಗೋಡು – ಕೋಟೆ ಆಂಜನೇಯ ದೇವಾಲಯ – ಆಂಜನೇಯ

೧೦. ಕುರುಗೋಡು – ಸಿದ್ಧೇಶ್ವರ ದೇವಾಲಯ – ತೀರ್ಥಂಕರ

೧೧. ಕುರುಗೋಡು – ಸಂಗಮೇಶ್ವರ ದೇವಾಲಯ – ವೀರಗಲ್ಲು

೧೨. ಕುರುಗೋಡು – ರಾಮಲಿಂಗೇಶ್ವರ ದೇವಾಲಯ – ಶಾಸನ

# ಮೂರ್ತಿ ಶಿಲ್ಪಗಳು



ಕುರುಗೋಡು- ವೀರಭದ್ರ ದೇವಾಲಯ- ವೀರಭದ್ರ



ಕುರುಗೋಡು- ದೊಡ್ಡ ಬಸವೇಶ್ವರ ದೇವಾಲಯ- ನಂದಿ



ಕೋಳೂರು- ಸೂರ್ಯನಾರಾಯಣ ದೇವಾಲಯ- ಭೈರವ



ಓರುವಾಯಿ- ಗಣೇಶ ದೇವಾಲಯ- ಗಣೇಶ



ಕುರುಗೋಡು- ಗಣೇಶ



ಕುರುಗೋಡು- ಸುಂಕ್ಲಮ್ಮ ದೇವಾಲಯ- ಸುಂಕ್ಲಮ್ಮ


ಕುರುಗೋಡು- ಕಾಳಮ್ಮ ದೇವಾಲಯ- ಕಾಳಿ


ಕೋಳೂರು- ಸೂರ್ಯನಾರಾಯಣ ದೇವಾಲಯ- ನಾರಾಯಣ



ಕುರುಗೋಡು- ಕೋಟೆ ಆಂಜನೇಯ ದೇವಾಲಯ- ಆಂಜನೇಯ



ಕುರುಗೋಡು- ಸಿದ್ಧೇಶ್ವರ ದೇವಾಲಯ- ತಿರ್ಥಂಕರ



ಕುರುಗೋಡು- ಸಂಗಮೇಶ್ವರ ದೇವಾಲಯ- ವೀರಗಲ್ಲು



ಕುರುಗೋಡು- ರಾಮಲಿಂಗೇಶ್ವರ ದೇವಾಲಯ- ಶಾಸನ